ಶಾರಾಂಶ ಹಸೀಲ
1139



# ಕನಕದಾಸರ ಸಾಹಿತ್ಯದಲ್ಲಿ ಬಂಡಾಯದ ದನಿ

ಕನ್ನಡ ಎಂ.ಫಿಲ್., ಪದವಿಗಾಗಿ
ಕಾವ್ಯಮಂಡಲದ ವತಿಯಿಂದ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ನಿಬಂಧ

ಸಂಶೋಧನಾ ವಿದ್ಯಾರ್ಥಿ
**ಅಲ್ಲಾಬಕ್ಷ ಮೋದಿನಸಾಬ ಚಪ್ಪರಮನಿ**

ನೊಂದಣಿ ಸಂಖ್ಯೆ : **KVMBKS–00681**

ಮಾರ್ಗದರ್ಶಕರು
**ಡಾ. ಶಿವಪ್ರಸಾದ್ ವೈ.ಎಸ್.**
ಸಹಪ್ರಾಧ್ಯಾಪಕರು
ಕ್ರೈಸ್ಟ್ ಯೂನಿವರ್ಸಿಟಿ
ಬೆಂಗಳೂರು – 560029


AKSHARA GRANTHALAYA
ACC.NO. 048948

ಕಾವ್ಯ ಮಂಡಲ, ಬೆಂಗಳೂರು

2014

1139

# ಪರಿವಿಡಿ

1139

## ದೃಢೀಕರಣ ಪತ್ರ

**'ಕನಕದಾಸರ ಸಾಹಿತ್ಯದಲ್ಲಿ ಬಂಡಾಯದ ದನಿ'** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

Y. S. Shivaprasad

ಮಾರ್ಗದರ್ಶಕರು

**ಡಾ॥ ವೈ.ಎಸ್. ಶಿವಪ್ರಸಾದ್,**

ಸಹ ಪ್ರಾಧ್ಯಾಪಕರು

ಕ್ರೈಸ್ಟ್ ಯೂನಿವರ್ಸಿಟಿ,

ಹೊಸೂರು ರಸ್ತೆ, ಬೆಂಗಳೂರು

ದಿನಾಂಕ : 12–7–2014

ಸ್ಥಳ : ಬೆಂಗಳೂರು

ಡಾ॥ ಶಿವಪ್ರಸಾದ್ ವೈ.ಎಸ್
ಸಹ ಪ್ರಾಧ್ಯಾಪಕರು
ಕನ್ನಡ ವಿಭಾಗ
ಕ್ರೈಸ್ಟ್ ಯೂನಿವರ್ಸಿಟಿ
ಬೆಂಗಳೂರು – 560 029

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ **'ಕನಕದಾಸರ ಸಾಹಿತ್ಯದಲ್ಲಿ ಬಂಡಾಯದ ದನಿ'** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ಡಾ॥ ವೈ.ಎಸ್. ಶಿವಪ್ರಸಾದ್, ಸಹ ಪ್ರಾಧ್ಯಾಪಕರು, ಕ್ರೈಸ್ಟ್ ಯೂನಿವರ್ಸಿಟಿ, ಹೊಸೂರು ರಸ್ತೆ, ಬೆಂಗಳೂರು, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 12-7-2014
ಸ್ಥಳ : ಬೆಂಗಳೂರು

**ಅಲ್ಲಾಬಕ್ಷ ಮೋದಿನಸಾಬ ಚಪ್ಪರಮನಿ**
ಸಂಶೋಧನಾ ವಿದ್ಯಾರ್ಥಿ

## ಅಧ್ಯಾಯ 1

# ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಕನ್ನಡ ಸಾಹಿತ್ಯ ಪರಂಪರೆಯು ಆದಿ ಕವಿ ಪಂಪನಿಂದ ಹಿಡಿದು ರಾಷ್ಟ್ರಕವಿ ಕುವೆಂಪುರವರೆಗೂ ಸಾಮಾಜಿಕ ಅನಿಷ್ಠತೆಯ ವಿರುದ್ಧ ಕೈಗೊಂಡ ಹೋರಾಟಕ್ಕೆ ಪ್ರಮುಖ ಸಾಕ್ಷಿಗಳಿವೆ. ಹನ್ನೆರಡನೆಯ ಶತಮಾನದಲ್ಲಿ ವಚನಕ್ರಾಂತಿಯ ಮುಖಾಂತರ ಕ್ರಾಂತಿಕಾರಿ ಬಸವಣ್ಣ ಹಾಗೂ ಅಲ್ಲಮ ಪ್ರಭುಗಳು ತಮ್ಮ ವಚನಗಳ ಮುಖಾಂತರ ಸಾಮಾಜದಲ್ಲಿನ ಮೌಢ್ಯತೆಯನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಸರ್ವಜ್ಞನೂ ಕೂಡಾ ವಚನಕ್ರಾಂತಿಯ ಮುಖಾಂತರ ಸಾಮಾಜಿಕ ಅಂಕು-ಡೊಂಕುಗಳನ್ನು ತಿದ್ದುವ ಕೆಲಸ ಮಾಡಿದನೆಂಬುದನ್ನು ಮರೆಯುವಂತಿಲ್ಲ. ತದನಂತರ ಹದಿನಾರನೆಯ ಶತಮಾನದಲ್ಲಿ ಸಮಾಜದಲ್ಲಿ ವ್ಯಾಪಿಸಿದ್ದ ವರ್ಣಭೇದ ನೀತಿಯನ್ನು ಕನಕದಾಸರು ಖಂಡಿಸಿದರು. ಉನ್ನತ ಕುಲದವರ ವಿರುದ್ಧ ಬಂಡಾಯ ಕೈಗೊಂಡು ಶೋಷಿತ ಸಮುದಾಯದ ಪರ ದನಿ ಎತ್ತಿದರು. ದಲಿತರಿಗೆ ಸಾಮಾಜಿಕ ಸಮಾನತೆಯ ನ್ಯಾಯ ದೊರಕಿಸಿಕೊಡಲು ಈ ನಾಡಿನ ದಲಿತ ವಿಮೋಚನ ಶಿಲ್ಪಿಯಾಗಿ ಕನಕದಾಸರು ಹುಟ್ಟಿ ಬಂದರು ಎಂಬುದಕ್ಕೆ ಕನಕದಾಸರ ಬದುಕೇ ಒಂದು ನಿದರ್ಶನ. ಏಕೆಂದರೆ ಅಂದಿನ ದಿನಮಾನಗಳಲ್ಲಿ ಪುರೋಹಿತಶಾಹಿ ದೌರ್ಜನ್ಯದೊಂದಿಗೆ, ದೀನದಲಿತರು ಹಾಗೂ ಅಸಹಾಯಕರ ಮೇಲೆ ನಡೆಯುತ್ತಿದ್ದ ಶೋಷಣೆಯಿಂದ ಶೋಷಿತ ವರ್ಗದವರನ್ನು ಮುಕ್ತಗೊಳಿಸಿ ಸರ್ವರನ್ನು ಸಮಾನತೆಯ ಮಾರ್ಗದತ್ತ ಕೊಂಡೊಯ್ಯಲು ದಾಸವರೇಣ್ಯರು ಬಂದರೆಂಬುದನ್ನು ಅರಿಯಬಹುದಾಗಿದೆ. ಅಂಥ ದಾಸ ಶ್ರೇಷ್ಠರಲ್ಲಿ ಕನಕದಾಸರು ವಿಶೇಷರಾಗಿದ್ದು ಅವರ ದಲಿತಪರ ಹೋರಾಟದ ಕ್ರಮವನ್ನು ಗುರುತಿಸುವುದೇ ಈ ನಿಬಂಧದ ಉದ್ದೇಶ.

ಕನಕದಾಸರು ಅಖಂಡ ಧಾರವಾಡ ಜಿಲ್ಲೆಯ ಬಂಕಾಪುರದ ಬಾಡ ಎಂಬ ಕುಗ್ರಾಮದಲ್ಲಿ ಡಣಾಯಕ ಮನೆತನದಲ್ಲಿ ಶೂದ್ರರಾಗಿ ಹುಟ್ಟಿದರು. ಅವರ ಮಾನವೀಯ ವೈಚಾರಿಕ ಮನೋಭಾವನೆಗಳು ಉಚ್ಚ ಜಾತಿಯವರ ಪಾಂಡಿತ್ಯವನ್ನೇ ಮೀರಿಸುವಂತಹವು. ಅಷ್ಟ ಮದಗಳಿಂದ ಮೆರೆವ ಜನರ ಅಮಾನವೀಯತೆಯನ್ನು ಖಂಡಿಸಿದರು. ಸರ್ವರಲ್ಲಿ

ಮಾನವೀಯತೆಯ ಗುಣಗಳನ್ನು ಬೆಳೆಸುವತ್ತ ಮನುಷ್ಯರನ್ನು ಅನೈತಿಕ ಮಾರ್ಗದಿಂದ ನೈತಿಕ ಮಾರ್ಗದತ್ತ ಕೊಂಡೊಯ್ಯಲು ಶತಪ್ರಯತ್ನ ಮಾಡಿದರೆಂಬುದಕ್ಕೆ ಅವರ ಕೀರ್ತನೆಗಳೇ ಸಾಕ್ಷಿ.

ಕನಕದಾಸರು ಅಂದಿನ ಅನಾಚಾರವನ್ನು ಖಂಡಿಸಿ ಕೆಳವರ್ಗದ ಜನಸಮುದಾಯದ ಜನರಿಗೆ ಬೆಂಬಲ ನೀಡುವುದರೊಂದಿಗೆ ಅವರ ಸಾಮಾಜಿಕ ಸಮಾನತೆಯ ಹಕ್ಕಿನ ಹೋರಾಟಕ್ಕೆ ಪ್ರೋತ್ಸಾಹದ ದನಿಯಾದರು. ಅಂದಿನ ಸಂಪ್ರದಾಯವಾದಿ ಮನಸ್ಸುಗಳು ಜಾತೀಯತೆ, ಅಂಧಶ್ರದ್ಧೆ, ನಾಟಕೀಯ ಭಕ್ತಿ, ಡಾಂಭಿಕ ಧರ್ಮಾಚರಣೆ, ಅರಾಜಕತೆ, ಮುಂತಾದ ಕೃತ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ದುಷ್ಟ ಶಕ್ತಿಗಳು ಮುಗ್ಧ ಜನರನ್ನು ನೆಮ್ಮದಿಯಿಂದ ಜೀವಿಸಲು ಬಿಡುತ್ತಿರಲಿಲ್ಲ. ಕೆಳವರ್ಗದವರನ್ನು ಖಡಾಖಂಡಿತವಾಗಿ ಊರಿನ ಹೊರಗೆ ಇರಿಸಲಾಗಿತ್ತು. ಮೇಲ್ವರ್ಗದವರು ಕೆಳವರ್ಗದವರನ್ನು ಮನಬಂದಂತೆ ಬಳಸಿಕೊಂಡು ಅವರಿಗೆ ನ್ಯಾಯಸಮ್ಮತ ವೇತನ ಕೊಡದೆ ವಂಚನೆಗೊಳಿಸುತ್ತಿದ್ದರು. ಇದನ್ನು ಕಂಡ ಕನಕದಾಸರು ಕೆಳವರ್ಗದವರ ಪರ ವಾದ ಮಂಡಿಸುತ್ತ, ತಮ್ಮ ಕೀರ್ತನೆಗಳ ಮುಖಾಂತರ ಮತಾಂಧರನ್ನು ಎಚ್ಚರಿಸುವ ಕೆಲಸ ಮಾಡಿದರು.

ಜ್ಞಾನ-ವಿಜ್ಞಾನದ ಹರಿವಿನಿಂದ ಕನಕದಾಸರು ಸಂಸಾರದ ಜಂಜಡದಿಂದ ಜನರನ್ನು ಮುಕ್ತಗೊಳಿಸಲು ಪ್ರಯತ್ನಿಸಿದರು. ಭಕ್ತಿ-ಭಾವ, ಆರಾಧನೆಗಳಂತಹ ಆಚರಣೆಗಳನ್ನು ಜನರ ಮನಸ್ಸಿನೆಡೆಗೆ ಹರಿಸಿದರು. ಆತ್ಮ-ಪರಮಾತ್ಮನ ಮಹತ್ವವನ್ನು ಕುರಿತು ಬೋಧಿಸುತ್ತ ನಿರಂತರವಾಗಿ ಜನರ ಹೃನ್ಮನಗಳಲ್ಲಿ ಬೇರೂರುವಂತೆ ಮಾಡಿದರು. ಭೇದ-ಭಾವದ ಬೇಲಿಯನ್ನು ಕಿತ್ತೆಸೆದು ಮನುಷ್ಯರ ಮನಸ್ಸುಗಳನ್ನು ಬೆಸೆಯಲು ಯತ್ನಿಸಿದರು. ಮಾನವನ ಬದುಕಿನಲ್ಲಿ ಶಾಂತಿ ಸ್ಥಾಪಿಸುವ ಮಹತ್ತರ ಸಾಧನೆ ಮಾಡಿದರು.

ಹನ್ನೆರಡನೆಯ ಶತಮಾನದ ವಚನ ಸಾಹಿತ್ಯಕ್ಕೂ ಹಾಗೂ ಹದಿನಾರನೇ ಶತಮಾನದ ದಾಸ ಸಾಹಿತ್ಯಕ್ಕೂ ಹೋಲಿಸಿದರೆ ವಚನ ಸಾಹಿತ್ಯದಷ್ಟು ಖ್ಯಾತಿಯನ್ನು ದಾಸ ಸಾಹಿತ್ಯ ಹೊಂದದೇ ಹೋಯಿತು. ಏಕೆಂದರೆ ವಚನ ಸಾಹಿತ್ಯದಲ್ಲಿ ಜಾತಿಗಿಂತ ನೀತಿಯೇ ಮುಖ್ಯವಾಯಿತು. ದಾಸ ಸಾಹಿತ್ಯದಲ್ಲಿ ನೀತಿಯೇ ಮುಖ್ಯವೆನಿಸಿತು. ಹೀಗಾಗಿ ವಚನ ಸಾಹಿತ್ಯದಲ್ಲಿ ನಾನಾ ವಿಧದ ವಚನಕಾರರು ಕಾಣಿಸಿಕೊಂಡರೆ ಹರಿದಾಸ ಸಾಹಿತ್ಯದಲ್ಲಿ ಶೂದ್ರ ಕನಕದಾಸರನ್ನು ಬಿಟ್ಟರೆ ಉಳಿದವರೆಲ್ಲರೂ ಉನ್ನತ ವರ್ಗಕ್ಕೆ ಸೇರಿದವರಾಗಿದ್ದಾರೆ. ಜಾತಿಯಿಂದ ಕುರುಬನಾದ ಕನಕದಾಸನನ್ನು ವಿಜಯನಗರದ ವೈದಿಕ ಗುರುಗಳಾದ ವ್ಯಾಸರಾಯರು ಶಿಷ್ಯನನ್ನಾಗಿ ಸ್ವೀಕರಿಸಿದರು. ಅದಕ್ಕೆ ಪ್ರತಿಯಾಗಿ ವ್ಯಾಸರಾಯರು ಶಿಷ್ಯಗಣದಿಂದ ವ್ಯಾಪಕ ಟೀಕೆಗೆ ಗುರಿಯಾಗಿ ನಿಂದನೆಗೊಳಪಟ್ಟರು. ಜಾತಿಗಿಂತ ನೀತಿ ಮೇಲು ಎಂಬುದನ್ನು ಶಿಷ್ಯರಿಗೆ ಅರುಹಿದ ವ್ಯಾಸರಾಯರು ಕನಕನ ಆಂತರಿಕ ಜ್ಞಾನಭಂಡಾರ ಹಾಗೂ ಅಚಲ ದೈವಭಕ್ತಿಯನ್ನು ಬಹಿರಂಗ ಪಡಿಸಿದರು. ವ್ಯಾಸರಾಯರು ಸರ್ವ

ಶಿಷ್ಯಂದಿರನ್ನು ಮಾನಸಿಕ ಸಮತೋಲನದಿಂದ ಕನಕನೊಂದಿಗೆ ಬೆರೆಸಲು ಪ್ರಯತ್ನಿಸಿದ್ದರೂ ಅದು ಫಲಕಾರಿಯಾಗಲಿಲ್ಲ. ಬ್ರಾಹ್ಮಣ ಶಿಷ್ಯವೃಂದವೇ ಬೇರೆ ಶೂದ್ರ ಕನಕನೇ ಬೇರೆ ಎಂಬ ಭಾವನೆಯೊಂದಿಗೆ ಪಂಡಿತರು ಕನಕನನ್ನು ಅತ್ಯಂತ ಹೀನಾಯ ದೃಷ್ಟಿಯಿಂದ ಕಾಣುವುದರೊಂದಿಗೆ ಮನ ನೋಯುವಂತೆ ಚುಚ್ಚು ಮಾತುಗಳನ್ನಾಡಿದ್ದೂ ಉಂಟು.

ಕನಕದಾಸರ ಗುರುಗಳು ಯಾರೆಂದು ನಿಖರವಾಗಿ ಹೇಳಲು ಸಾಧ್ಯವಾಗದು. ಏಕೆಂದರೆ ಒಂದೇ ಗುರುವಿನ ಸನ್ನಿಧಾನದಲ್ಲಿ ಕನಕದಾಸರು ವಿದ್ಯೆ ಹಾಗೂ ಜ್ಞಾನಾರ್ಜನೆ ಪಡೆದವರಾಗಿಲ್ಲ. ಒಂದೆಡೆ ನೋಡುವುದಾದರೆ, ತಾತಾಚಾರ್ಯರು ಇವರ ಮೂಲ ಗುರುಗಳೆಂದು ತಿಳಿದು ಬರುತ್ತದೆ. ಆದರೆ ಕನಕದಾಸರು ತಮ್ಮ ಕಾವ್ಯಗಳಲ್ಲಿ ವಾದಿರಾಜರನ್ನು ಹಾಗೂ ವ್ಯಾಸರಾಯರನ್ನು ಹೊಗಳಿರುವುದರಿಂದ ಇವರೆಲ್ಲರಲ್ಲಿ ಯಾರೂ ಸ್ಥಿರವಾದ ಗುರುಗಳಲ್ಲ ಎಂಬುದನ್ನು ನಾವು ಪರಿಗಣಿಸಬೇಕಾಗುತ್ತದೆ. ಕಾಲಜ್ಞಾನಿಗಳಾಗಿದ್ದ ಕನಕದಾಸರು ಮನುಕುಲದ ಒಳಿತನ್ನು ಬಯಸಿ ಪರಸ್ಪರ ಸಾಮರಸ್ಯದೊಂದಿಗೆ ಜೀವನ ನಡೆಸಲು ಅಡಿಪಾಯ ಹಾಕಿ ಜನಜಾಗೃತಿಯತ್ತ ಮುನ್ನಡಿ ಇಟ್ಟವರು. ಆದರೆ ವ್ಯಾಸರಾಯರು ಕನಕನಲ್ಲಿಯ ದಿವ್ಯಜ್ಞಾನವನ್ನು ಗುರುತಿಸಿ ಆತನನ್ನು ಶಿಷ್ಯನನ್ನಾಗಿ ಸ್ವೀಕರಿಸಿದರೆಂದರೆ ತಪ್ಪಾಗದು. ವೈದಿಕ ಸಂಪ್ರದಾಯದ ಕಟ್ಟಳೆಗಳನ್ನು ಮೀರಿ ಶೂದ್ರ ಕನಕನನ್ನು ಶಿಷ್ಯನನ್ನಾಗಿ ಸ್ವೀಕರಿಸಿದ್ದೆಂದರೆ ಇಲ್ಲಿ ವ್ಯಾಸರಾಯರೂ ಜಾತೀಯತೆಯ ಬೇಲಿಯನ್ನು ಕಿತ್ತೊಗೆದು ಮನುಜ ಮತದ ಸ್ಥಾಪನೆಗೆ ಮುಂದಾಗಿದ್ದಾರೆಂಬುದು ತಿಳಿದು ಬರುತ್ತದೆ.

ಕನಕದಾಸರ ಅನನ್ಯ ಸಾಧನಾ ಕ್ರಮವನ್ನು ಗ್ರಹಿಸಿದ ವ್ಯಾಸರಾಯರು ಅವರ ಅಪರಿಮಿತ ಜ್ಞಾನಾಸಕ್ತಿಯನ್ನು ಮೆಚ್ಚಿ, ಗುರುದೀಕ್ಷೆ ನೀಡಲು ಮುಂದಾಗಿದ್ದರು. ಇದು ವ್ಯಾಸರಾಯರ ಹೃದಯ ವೈಶಾಲ್ಯತೆಗೆ ಹಿಡಿದ ಕನ್ನಡಿ. ಸಂಪ್ರದಾಯವನ್ನು ಮುರಿದು ಶೂದ್ರ ಕನಕದಾಸರನ್ನು ದೀಕ್ಷೆಗೊಳಿಸಲು ಮುಂದಾದ ಕ್ರಮವನ್ನು ಬ್ರಾಹ್ಮಣರು ಕಟುವಾಗಿ ಟೀಕಿಸಿದರು. ಆದರೂ ಕನಕದಾಸರನ್ನು ವ್ಯಾಸರಾಯರು ತಮ್ಮ ಮಠದಿಂದ ಹೊರಗೆ ಕಳಿಸಲಿಲ್ಲವೆಂದರೆ ಕನಕದಾಸರ ಮೇಲಿರುವ ಪ್ರೀತಿ ಅನನ್ಯವಾದುದು. ದೀಕ್ಷೆಗೆ ಶಿಷ್ಯವೃಂದದ ವಿರೋಧ ವಿಪರೀತವಾದುದರಿಂದ ಕನಕದಾಸರಿಗೆ ವ್ಯಾಸರಾಯರು ಗುರೂಪದೇಶ ನೀಡಿ ಗೌರವಿಸಿದರೇ ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ. ವೈದಿಕ ಶಿಷ್ಯಂದಿರಲ್ಲಿ ಮನೆ ಮಾಡಿಕೊಂಡಿದ್ದ ಮತಾಂಧತೆಯನ್ನು ಕಳೆಯಲು ಕನಕದಾಸನನ್ನು ಅನೇಕ ರೀತಿಯಾಗಿ ಪರೀಕ್ಷೆಗೊಳಪಡಿಸಿದರು. ಅಮೂರ್ತನಾದ ದೇವರು ನಾನು ಹೋದಲ್ಲೆಲ್ಲ ಜೊತೆಯಲ್ಲಿಯೇ ಇರುತ್ತಾನೆ. ಆದ್ದರಿಂದ ಅವನಿಲ್ಲದ ಜಾಗ ಎಲ್ಲಿಯೂ ಇಲ್ಲದ ಕಾರಣ ಬಾಳೆಹಣ್ಣನ್ನು ತಿನ್ನಲಿಲ್ಲವೆಂಬ ಬಾಳೆಹಣ್ಣಿನ ಪ್ರಸಂಗ, ನಾಯಿ–ನಾರಾಯಣನ ರೂಪವನ್ನು ತೋರಿಸಿದ್ದು, ಸ್ವರ್ಗಕ್ಕೆ ನಾನು ಹೋದರೆ ಹೋದೇನು ಎಂಬ ಪ್ರಸಂಗಗಳು ಕನಕನಲ್ಲಿಯ ಆಂತರಿಕ ಜ್ಞಾನದ ಮಹತ್ವವನ್ನು ಬಹಿರಂಗಗೊಳಿಸಿದವು.

ಕನಕದಾಸರು ವೈವಿಧ್ಯಮಯ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಅವರು ಹರಿದಾಸರಾಗಿದ್ದರೂ ಬರೀ ಆಧ್ಯಾತ್ಮಿಕತೆಗೆ ಸಾಹಿತ್ಯವನ್ನು ಮೀಸಲಿರಿಸಲಿಲ್ಲ. ಲೌಕಿಕ

ಹಾಗೂ ಆಧ್ಯಾತ್ಮಿಕ ಹಿತ ಚಿಂತನೆಗಳ ಕುರಿತಾಗಿ ಸಾಹಿತ್ಯವನ್ನು ರಚಿಸಿದ್ದಾರೆ. ಕೀರ್ತನೆ, ಕಾವ್ಯ, ಮುಂಡಿಗೆ ಮುಂತಾದ ಪ್ರಕಾರಗಳಲ್ಲಿ ಸಾಹಿತ್ಯ ರಚಿಸಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ.

ಕನಕದಾಸರು ಕೇವಲ ಕೀರ್ತನಕಾರರಷ್ಟೇ ಅಲ್ಲದೆ ಒಬ್ಬ ಕವಿಯೂ, ಕತೆಗಾರರೂ ಆಗಿದ್ದಾರೆ. ಅವರು ರಚಿಸಿರುವ ರಾಮಧಾನ್ಯ ಚರಿತ್ರೆ, ನಳಚರಿತ್ರೆ ಮತ್ತು ಮೋಹನ ತರಂಗಿಣಿ, ಕಾವ್ಯದ ಮುಖಾಂತರ ಹೇಳುವ ಕತೆಗಳೇ ಆಗಿವೆ. ಈ ಎಲ್ಲ ಕೃತಿಗಳೂ ಜನಸಾಮಾನ್ಯರ ಹಾಗೂ ಶೋಷಣೆಗೊಳಗಾದವರ ಪರ ವಾದ ಮಂಡಿಸಿ ಮೇಲ್ವರ್ಗದ ಹಾಗೂ ಅಧಿಕಾರಶಾಹಿ ಪುರೋಹಿತರ ವಿರುದ್ಧ ಎತ್ತಿದ ಬಂಡಾಯದ ದನಿಯನ್ನೊಳಗೊಂಡವುಗಳಾಗಿವೆ. ಹದಿನಾರನೆಯ ಶತಮಾನದಲ್ಲಿ ಬಂಡಾಯದ ದನಿ ಎತ್ತಿದ ಏಕೈಕ ದಾಸರೆಂದರೆ ಕನಕದಾಸರು ಅಂದಿನ ದಲಿತರ ದಯನೀಯ ಸ್ಥಿತಿ ಕಂಡು ಮರುಗಿದರು. ಬಂಡಾಯದೊಂದಿಗೆ ಶೋಷಿತ ವರ್ಗದ ಏಳ್ಗೆ ಬಯಸಿ ಹೋರಾಟಕ್ಕಿಳಿದರು.

ಕನಕದಾಸರ ದೃಷ್ಟಿಯಲ್ಲಿ ಬಂಡಾಯವೆಂದರೆ, ಶಸ್ತ್ರಾಸ್ತ್ರಗಳನ್ನು ಉಪಯೋಗಿಸಿ ರಕ್ತಪಾತ ಮಾಡುವುದಾಗಿರಲಿಲ್ಲ. ಆದ ಅಪಮಾನವನ್ನು ಮೌನವಾಗಿ ಸ್ವೀಕರಿಸಿ ಸೂಕ್ಷ್ಮವಾಗಿ ಪರಿಹಾರ ಕಂಡುಹಿಡಿಯುವುದು ಅದರ ಉದ್ದೇಶವಾಗಿತ್ತು. ಸಂಪ್ರದಾಯಸ್ಥ ವೈದಿಕರ ವಿರುದ್ಧ ದನಿ ಎತ್ತುವುದೆಂದರೆ ಸಾಮಾನ್ಯ ವಿಷಯ ಆಗಿರಲಿಲ್ಲ. ಮನುಷ್ಯನಾದವನು ಸಮಾನ ಹಕ್ಕನ್ನು ಹೊಂದಿರುವಾಗ ಪ್ರತ್ಯೇಕ ಸಮುದಾಯಗಳ ಮಾತೆಲ್ಲಿಯದು?

ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲಿರಾ ಬಲ್ಲಿರ?[1]

ಎಂದು ಮೇಲ್ವರ್ಗವನ್ನು ಪ್ರಶ್ನಿಸಿ ಢಾಂಬಿಕ ಆಚರಣೆಗಳಿಂದ ಮಡಿವಂತರನ್ನು ಮುಕ್ತಗೊಳಿಸಲು ಕನಕದಾಸರು ನಡೆಸಿದ ಪ್ರಯತ್ನ ವಿಶೇಷವಾಗಿದೆ.

ಹುಟ್ಟುವ ಮೊದಲು ಯಾವ ಜಾತಿಯ ನೆರಳನ್ನೂ ಕಾಣದ ಮಗು ವಿಶ್ವಮಾನವನಾಗಿ ಭುವಿಗೆ ಬರುತ್ತದೆ. ಶೈಶವಾವಸ್ಥೆಯಲ್ಲಿ ಮಗು ಜಾತಿ–ಮತ–ಪಂಥಗಳನ್ನು ಎಳ್ಳಷ್ಟು ಅರಿಯದಾಗಿರುತ್ತದೆ. ಮಗುವಿನ ಮಾನಸಿಕ ವೃದ್ಧಿಯಾಗುತ್ತ ಹೋದಂತೆ ಸಮಾಜದಲ್ಲಿಯ ಎಲ್ಲ ಆಚರಣೆಗಳ ಕಡೆಗೆ ಗಮನ ಹರಿಸುತ್ತದೆ. ಮುಂದೆ ಜಾತಿವಾದಿಗಳ ಮಾರ್ಗದರ್ಶನದಂತೆ ಒಂದು ಜಾತಿಗೆ ಸೀಮಿತವಾಗಿ ಬೆಳೆಯುತ್ತದೆ. ಎಂಬುದನ್ನು ಕನಕದಾಸರೂ ಅರಿತವರಾಗಿದ್ದರು. ಜಾತೀಯತೆಯ ದಳ್ಳುರಿಗೆ ಸಿಲುಕಿ ಮೇಲ್ವರ್ಗದವರಿಂದ ಶೋಷಣೆಗೆ ಒಳಗಾಗಿದ್ದಾರೆಂಬುದು ಅವರ ಕೀರ್ತನೆಗಳಲ್ಲಿ ಕಂಡುಬರುತ್ತದೆ. ಅಂತೆಯೇ ಅವರು ಶೋಷಿತ ವರ್ಗದವರ ಪರ ದನಿ ಎತ್ತಿ ಮೇಲ್ವರ್ಗದವರ ವಿರುದ್ಧ ಬಂಡಾಯದ ಕಿಡಿ ಕಾರಿದರೆಂಬುದು ತಿಳಿದು ಬರುತ್ತದೆ.

‘ಆತನೊಲಿದ ಮೇಲೆ ಇನ್ಯಾತರ ಕುಲವಯ್ಯ?’ ಎಂಬ ಪ್ರಶ್ನೆಯನ್ನು ಮೇಲ್ವರ್ಗದವರ

ಮುಂದಿಡುತ್ತ ದೇವರು ಸರ್ವಾಂತರ್ಯಾಮಿ. ಆತನೊಲುಮೆಗೆ ಪಾತ್ರರಾಗುವ ಎಲ್ಲ ಮನುಜರೂ ಮನುಕುಲದ ಶ್ರೇಷ್ಠರಾಗಿರುತ್ತಾರೆ. ಅವರಿಗೆ ಭಗವಂತನ ಒಲುಮೆ ಸದಾ ಇರುವುದರಿಂದ ಆತನನ್ನು ಯಾವ ಕುಲಕ್ಕೂ ಹೋಲಿಸಲಾಗದು. ಆತನದು ಮನುಜಕುಲವೆಂದೇ ಪರಿಗಣಿಸಬೇಕಾಗುತ್ತದೆ ಎಂದು ಕನಕದಾಸರು ಹೇಳಿದ್ದಾರೆ. ಜಗದೊಡೆಯನಾದ ಭಗವಂತ (ಆದಿಕೇಶವ)ನೇ ಒಲಿದಾದ ಮೇಲೆ ಇನ್ನಾವ ಕುಲವನ್ನು ಕುರಿತು ನಾನು ಹೇಳಲಿ? ನನ್ನದೊಂದು ದೇವ ನಿರ್ಮಿತ ಮನುಜ ಕುಲ. ಅದೇ ಕುಲದಲ್ಲಿ ನಾನು ಭಗವಂತನನ್ನು ಕಾಣ ಹೊರಟವನು. ನನ್ನನ್ನು ಸೃಷ್ಟಿಸಿದಾತನನ್ನು ನಾನು ಅಹೋರಾತ್ರಿ ಆತನ ನಾಮಸ್ಮರಣೆಯೊಂದಿಗೆ ಆತನಲ್ಲಿಯೇ ಹೋಗಿ ಸೇರಲಿಚ್ಛಿಸಿದ್ದೇನೆ. ಆತನೆ ನನ್ನ ಮಾರ್ಗದರ್ಶಕ. ಆತನೇ ನನ್ನ ಸಂರಕ್ಷಕ ಹಾಗೂ ಸರ್ವಸ್ವ. ಅಣು-ರೇಣು-ತೃಣಕಾಷ್ಟಗಳಲ್ಲಿ ಆತನನ್ನು ನಾನು ಕಾಣ ಹೊರಟಿದ್ದೇನೆ. ಆತನನ್ನು ನೋಡುವ ಹಂಬಲ ನನ್ನದಾಗಿದೆ. ಅವನನ್ನು ಒಲಿಸಿಕೊಳ್ಳುವ ತವಕದಲ್ಲಿದ್ದೇನೆ ಎಂಬ ಅಂಶಗಳನ್ನು ಕೀರ್ತನೆಗಳಲ್ಲಿ ತೋಡಿಕೊಂಡಿದ್ದಾರೆ.

ಕುಲವೆಂಬುದು ಬರೀ ಮೇಲ್ವರ್ಗದವರಿಗಷ್ಟೇ ಸೀಮಿತವಾದುದಲ್ಲ. ಅಲ್ಲದೆ ಸಂಸ್ಕೃತ ಕಲಿತ ಪಂಡಿತರದಷ್ಟೇ ಶ್ರೇಷ್ಠ ಕುಲವೂ ಅಲ್ಲ. ಸುಶಿಕ್ಷಿತನಾಗಿಯೂ ದೈವದಲ್ಲಿ ಅಚಲ ಭಕ್ತಿ ವಿಶ್ವಾಸವನ್ನು ಹೊಂದದೆ ಢಾಂಬಿಕ ಭಕ್ತಿಯ ಆಚರಣೆಯೊಂದಿಗೆ ಮುಗ್ಧ ಜನರನ್ನು ವಂಚಿಸಿ ಅವರನ್ನು ಅಡ್ಡ ದಾರಿಯತ್ತ ಕೊಂಡೊಯ್ಯುವ ಬ್ರಾಹ್ಮಣರಿಗಾಗಲಿ ಹಾಗೂ ವೈದಿಕರಿಗಾಗಲಿ ವಿಶೇಷವಾದ ಯಾವುದೇ ಕುಲವಿಲ್ಲ. ಸಮಾಜದ ಬದ್ಧತೆಗೆ ಪಾತ್ರನಾಗಿ ಸಾಮಾಜಿಕವಾಗಿ ಪರಸ್ಪರರಲ್ಲಿ ಸಮಾನತೆಯನ್ನು ಸೃಷ್ಟಿಸಲು ಪ್ರಯತ್ನಿಸುವ ಯಾವುದೇ ಜಾತಿಯ ಮನುಷ್ಯನಾಗಿರಲಿ ಆತನದೇ ನೈಜ ಮನುಕುಲವಾಗಿದೆ. ಅವರೇ ಭಗವಂತನ ದೃಷ್ಟಿಯಲ್ಲಿ ಉಚ್ಚ ಕುಲಕ್ಕೆ ಪಾತ್ರರಾಗುತ್ತಾರೆ. ಆದ್ದರಿಂದ ಭಗವಂತನ ಆರಾಧನೆಗಾಗಲಿ, ಆತನ ಕೃಪೆಗೆ ಪಾತ್ರರಾಗುವುದಕ್ಕಾಗಲೀ ಯಾವ ಉನ್ನತ ಕುಲದ ಅವಶ್ಯಕತೆಯೂ ಇಲ್ಲ. ನಿರ್ಮಲ ಚಿತ್ತ, ಸ್ವಚ್ಛ ಮನಸ್ಸು, ಭಕ್ತಿಯಲ್ಲಿ ದೃಢವಿಶ್ವಾಸ ಮತ್ತು ಏಕಾಗ್ರತೆಯನ್ನು ಪ್ರದರ್ಶಿಸುವ ಯಾವುದೇ ಜಾತಿಯವನಾದರೂ ಸರಿ ಅಂಥ ಅರ್ಹತೆಯನ್ನು ಹೊಂದಿದಾತನ ಭಕ್ತಿಗೆ ಮೆಚ್ಚಿ ಭಗವಂತನು ಒಲಿಯುತ್ತಾನೆ. ಎಂಬ ಮಾತಿನೊಂದಿಗೆ ಢಾಂಬಿಕ ಆಚರಣೆಯೊಂದಿಗೆ ತಮ್ಮನ್ನೇ ಸಮರ್ಥಿಸಿಕೊಳ್ಳುತ್ತಿದ್ದ ಬ್ರಾಹ್ಮಣರನ್ನು ಕುರಿತು ಕನಕದಾಸರು ಪ್ರಶ್ನಿಸುತ್ತಾರೆ.

ಅಂದಿನ ದಲಿತರ ಸ್ಥಿತಿ-ಗತಿಗಳು ತುಂಬಾ ಹೀನಾಯವಾಗಿದ್ದವು. ಚತುರ್ವರ್ಣಗಳ ನಂತರ ಪಂಚಮ ವರ್ಣಕ್ಕೆ ಸೇರಿದ ದಲಿತರ ಬದುಕಂತೂ ತುಂಬಾ ಶೋಚನೀಯವಾಗಿತ್ತು. ಅಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ದಲಿತರು, ಕುಲಿನ, ಅಸ್ಪರ್ಶ, ತಿರಸ್ಕರಿಸಲ್ಪಟ್ಟವರು, ಹೊರಗಿನವರು ಎಂಬೆಲ್ಲ ತಿರಸ್ಕಾರದ ಹೆಸರುಗಳಿಂದ ಕರೆಯಿಸಿಕೊಳ್ಳಬೇಕಾಗುತ್ತಿತ್ತು. ದಲಿತರಿಗೆ ಸಮಾಜದಲ್ಲಿ ಯಾವುದೇ ಸ್ಥಾನಮಾನವಿರಲಿಲ್ಲ. ಅವರು ಊರೊಳಗೆ ಬರುವುದು ಅಪಚಾರವಾಗಿತ್ತು. ಇನ್ನು ಸಮಾಜದಿಂದ ಸಿಗುವ ಸನ್ಮಾನ ಹಾಗೂ ಗೌರವಗಳು ಕನಸಿನ

ಮಾತುಗಳೇ ಆಗಿದ್ದವು. ದಲಿತರು ಅತ್ಯಂತ ಕೆಳಮಟ್ಟದ ವೃತ್ತಿಯಲ್ಲಿ ತೊಡಗಿದ್ದರಿಂದ ಅವರನ್ನು ಪಂಚವರ್ಣೀಯರೆಂದು ಊರಿನ ಹೊರಗೆ ಇರುವಂತೆ ಆಜ್ಞೆ ಮಾಡಿದ್ದರು. ಯಾವುದೇ ಕಾರಣಕ್ಕೂ ಬ್ರಾಹ್ಮಣ ಕೇರಿಗಳಲ್ಲಿ ಬರುವಂತಿರಲಿಲ್ಲ. ಅವರಿಗೆ ಯಾವುದೇ ಶಿಕ್ಷಣ ಹೊಂದುವ ಹಕ್ಕು ಇರಲಿಲ್ಲ. ಮೇಲ್ವರ್ಗದ ಮಕ್ಕಳಿಗಷ್ಟೇ ಸಂಸ್ಕೃತ ಪಾಠಶಾಲೆಗಳಲ್ಲಿ ಪ್ರವೇಶವಿತ್ತು. ವೇದಗಳನ್ನು ಬ್ರಾಹ್ಮಣರಷ್ಟೇ ಕಲಿಯುವುದು ಪವಿತ್ರ ಕಾರ್ಯವಾಗಿತ್ತು. ಹೊರಕೇರಿಯ ದಲಿತರು ಸಂಸ್ಕೃತ, ವೇದ ಪಾಠ ಕಲಿಯುವುದು ಒತ್ತಟ್ಟಿಗಿರಲಿ ಓದುವ ಧ್ವನಿಯನ್ನು ಕೇಳಿಸಿಕೊಳ್ಳುವುದು ಅಪರಾಧವಾಗಿತ್ತು.

ಮೇಲ್ವರ್ಗದವರಿಗೆ ದಲಿತರ ಅವಶ್ಯಕತೆ ಇದ್ದಾಗ ಮಾತ್ರ ಊರೊಳಗೆ ಪ್ರವೇಶದ ಸಡಿಲಿಕೆ ಇತ್ತು. ಕೇರಿಗಳಲ್ಲಿ ಪ್ರಾಣಿಗಳು, ನಾಯಿಗಳು ಸತ್ತರೆ ಅವುಗಳನ್ನು ಊರ ಹೊರಗೆ ಸಾಗಿಸಬೇಕಾದ ಸಂದರ್ಭದಲ್ಲಿ ಅವರು ಊರೊಳಗೆ ಬರಬೇಕಾಗುತ್ತಿತ್ತು. ಊರಿನ ಯಾವುದಾದರೊಂದು ಕೇರಿಯಲ್ಲಿ ಸಾವು ಸಂಭವಿಸಿದ್ದರೆ ಹೆಣಗಳನ್ನು ಹೊರಲು ದಲಿತರನ್ನು ಬಳಸಿಕೊಳ್ಳುತ್ತಿದ್ದರು.

ಕನಕದಾಸರ ಅಂದಿನ ಕಾಲದಲ್ಲಿ ಇದ್ದ ತಾರತಮ್ಯ ಭಾವನೆ ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಜೀವಂತವಾಗಿದೆ. ಇದೆಲ್ಲವನ್ನು ಅತೀ ಸೂಕ್ಷ್ಮದೃಷ್ಟಿಯಿಂದ ಕನಕದಾಸರು ನೋಡಿದರು. ಶೋಷಣೆಗೀಡಾಗುತ್ತಿದ್ದ ಕೆಳವರ್ಗದವರನ್ನು ಮೇಲೆತ್ತುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇಷ್ಟಕ್ಕೆ ಮುಗಿಯದ ಉಪಟಳ, ಇನ್ನೂ ಅಪಾಯಕರವಾಗಿತ್ತು. ದಲಿತರು ಬ್ರಾಹ್ಮಣರ ಕೇರಿಯಲ್ಲಷ್ಟೇ ಅಲ್ಲದೆ ಊರಿನ ಯಾವುದೇ ಭಾಗದಲ್ಲಿ ನಡೆದಾಡುವುದಾಗಲಿ, ಉಗುಳುವುದಾಗಲಿ ಮಾಡುವಂತಿರಲಿಲ್ಲ. ಪರವಾನಿಗೆ ಇಲ್ಲದೆ ಊರೊಳಗೆ ಪ್ರವೇಶಿಸಿದರೆ ಅಪವಿತ್ರತೆಯ ಆರೋಪ ಹೊರೆಸಿ ಕಂಬಕ್ಕೆ ಕಟ್ಟಿ ಛಡಿ ಏಟು ಕೊಟ್ಟು ಶಿಕ್ಷಿಸುತ್ತಿದ್ದರು. ಸಂಸ್ಕೃತ ಶಾಲೆಗಳ ಮೇಲೆ ದಲಿತರ ನೆರಳು ಬೀಳುವುದೂ ಅಪರಾಧವಾಗಿದ್ದಿತು. ದಲಿತ ಮಕ್ಕಳು ಕದ್ದು ಮುಚ್ಚಿ ಸಂಸ್ಕೃತ ಹಾಗೂ ವೇದ ಪಾಠಗಳನ್ನು ಕಲಿತದ್ದೇ ಆದರೆ ಸಾರ್ವಜನಿಕವಾಗಿ ಅವರನ್ನು ಶಿಕ್ಷಿಸುತ್ತಿದ್ದರು. ಸಂಸ್ಕೃತ ಕೇಳಿದ ಕಿವಿಗಳಲ್ಲಿ ಕಾಯಿಸಿದ ಸೀಸವನ್ನು ಹೊಯ್ಯುವುದು, ಪುಸ್ತಕಗಳನ್ನು ನೋಡಿದ ಕಣ್ಣುಗಳನ್ನೇ ಕೀಳುವುದು ಶಿಕ್ಷೆಗಳಲ್ಲಿ ಒಂದಾಗಿತ್ತು. ಊರೊಳಗೆ ಬರುವುದು ಅನಿವಾರ್ಯವಾಗಿದ್ದಲ್ಲಿ ದಲಿತರು ತಮ್ಮ ಕಾಲುಗಳ ನಡುವೆ ಗುಮರಿಗಳನ್ನು ಕಟ್ಟಿಕೊಂಡು ಸದ್ದು ಮಾಡುತ್ತ ಬರಬೇಕಾಗಿತ್ತು. ಗುಮರಿಗಳ ಸಪ್ಪಳ ಕೇಳಿಸಿಕೊಂಡ ಬ್ರಾಹ್ಮಣರು ದಲಿತ ಬರುತ್ತಿದ್ದಾನೆಂದು ತಿಳಿದು ಬೇರೆ ಮಾರ್ಗವಾಗಿ ಹೋಗುತ್ತಿದ್ದರು. ಒಂದು ವೇಳೆ ಉಗುಳುವ ಪ್ರಸಂಗ ಬಂದರೆ ಸೊಂಟದಲ್ಲಿ ಕಟ್ಟಿಕೊಂಡ ಚಿಪ್ಪಿನಲ್ಲಿ ಉಗುಳಬೇಕಾಗಿತ್ತು. ದಲಿತರ ನೆರಳೇ ಬ್ರಾಹ್ಮಣರಿಗೆ ಅಪವಿತ್ರವಾದ್ದರಿಂದ ಇನ್ನು ದಲಿತರನ್ನು ಮುಟ್ಟುವುದು ಮಾತನಾಡಿಸುವುದಾಗಲಿ ಮಹಾ ಪಾಪದ ಕೆಲಸವಾಗಿತ್ತು. ಯಾರಾದರೂ ಬ್ರಾಹ್ಮಣರು ದಲಿತರನ್ನು ಮಾತನಾಡಿಸಿದರೆ, ಸಂಸ್ಕೃತ ವೇದ ಪಾಠ ಹೇಳಿಕೊಡಲು ಮುಂದಾದರೆ ಅಂಥವರನ್ನು ಬ್ರಾಹ್ಮಣ ಸಮಾಜವು ಶಿಕ್ಷಿಸುವುದರೊಂದಿಗೆ ಬಹಿಷ್ಕಾರ ಹಾಕಿ ಅವರನ್ನು ಅಪವಿತ್ರ ಬ್ರಾಹ್ಮಣರೆಂದು ಸಮಾಜದಿಂದ ಹೊರಗಿಡುತ್ತಿದ್ದರು.

'ಕುಲವಾವುದು? ಸತ್ಯ ಸುಖವುಳ್ಳ ಜನರಿಗೆ'[2]

ಮಾನವ ಜೀವನದ ಸಾರ್ಥಕತೆಯನ್ನು ಮಾನವೀಯ ಗುಣಗಳಿಂದ ಪಡೆಯಬಹುದೆಂದು ಕನಕದಾಸರು ಜಾತೀಯತೆಯ ಜಂಜಡದಲ್ಲಿ ಸಿಲುಕಿ ತಮ್ಮ ಮಾನವೀಯ ಮೌಲ್ಯವನ್ನೇ ಕಳೆದುಕೊಳ್ಳುತ್ತಿರುವ ಕೆಲ ಅಜ್ಞಾನಿಗಳನ್ನು ಕುರಿತು ಹೇಳಿದ್ದಾರೆ.

ಸತ್ಯವೆಂಬುದು ಕಣ್ಣಿಗೆ ಕಾಣದ ವಸ್ತುವಾಗಿದ್ದರೂ ಅದು ದೈನಂದಿನ ಆಚರಣೆಯಲ್ಲಿ ಮನುಷ್ಯನನ್ನು ಗೌರವದ ಕಡೆಗೆ ಕೊಂಡೊಯ್ಯುವ ಸಾಧನವಾಗಿದೆ. ಯಾರು ಸತ್ಯವನ್ನು ನುಡಿಯುವರೋ ಅವರಲ್ಲಿ ದೈವತ್ವವನ್ನು ಕಾಣಬಹುದು. ನೆಪಕ್ಕೆ ಸ್ನಾನ ಮಾಡಿ, ಒದ್ದೆ ಬಟ್ಟೆ ತೊಟ್ಟು, ಮೈತುಂಬ ಬೂದಿ ಬಳಿದುಕೊಂಡು ಹಣೆಯ ಮೇಲೆ ವಿವಿಧ ರೀತಿಯ ನಾಮಗಳನ್ನು ಹಾಕಿಕೊಂಡು, ಸುಳ್ಳು ಮಂತ್ರಗಳನ್ನು ಜಪಿಸಿ ಹಗಲು ವೇಷಧಾರಿಗಳಂತೆ ವಿವಿಧ ವೇಷಗಳನ್ನು ಬದಲಿಸುತ್ತ ಮುಗ್ಧ ಜನರನ್ನು ನಿತ್ಯವೂ ವಂಚಿಸುವ ಜನರು ಮಾನವೀಯ ಗುಣಗಳಿಂದ ಶೋಭಿಸಲಾರರು. ಎಂದು ಕನಕದಾಸರರು ಅಂದಿನ ನಯ ವಂಚಕರ ಅಸತ್ಯದ ಆಚರಣೆಯನ್ನು ಖಂಡಿಸಿ ನುಡಿದಿದ್ದಾರೆ. ಸುಳ್ಳು-ಸುಳ್ಳುಗಳ ಸುರುಳಿಯನ್ನು ಬಿಚ್ಚುತ್ತ ತಮ್ಮ ಸ್ವಾರ್ಥ ಸಾಧನೆಯಲ್ಲಿ ಜನರನ್ನು ವಂಚಿಸಿ ಪಾಪದ ಫಲ ಅನುಭವಿಸಿ ಜೀವನದಲ್ಲಿ ನರಕಯಾತನೆ ಅನುಭವಿಸುವುದು ಉಚಿತವಲ್ಲ. ಸತ್ಯಮಾರ್ಗದಲ್ಲಿ ನಡೆದು ಎಲ್ಲರ ಮೆಚ್ಚುಗೆಗೆ ಪಾತ್ರವಾಗುವುದು ಒಳ್ಳೆಯದೆಂದು ಬೋಧಿಸಿದರು. ಮುಗ್ಧರನ್ನು ವಂಚಿಸಿ ಸ್ವಾರ್ಥದೊಡಲು ತುಂಬಿಕೊಳ್ಳಲು ಹೊರಟ ಮೇಲ್ವರ್ಗದವರಿಗೆ ತಮ್ಮ ತಪ್ಪಿನ ಅರಿವು ಮೂಡಿಸಿದ್ದಾರೆ. ಸತ್ಯ ಮಾರ್ಗದಲ್ಲಿ ನಡೆದು ಇತರರನ್ನು ಸತ್ಯ ಮಾರ್ಗದತ್ತ ಕೊಂಡೊಯ್ಯಲು ಪ್ರಯತ್ನಿಸುವವರೆಲ್ಲರೂ ಆದರ್ಶವಾದಿಗಳೆಂದು ದಲಿತ ವರ್ಗದವರನ್ನು ಬೆಂಬಲಿಸಿ ಹೇಳಿದ್ದಾರೆ.

ಕನಕದಾಸರ ಕೀರ್ತನೆಗಳು, ಕಾವ್ಯಗಳು, ಮುಂಡಿಗೆಗಳಲ್ಲಿಯ ಸಾಹಿತ್ಯಕ ವಿಚಾರವನ್ನು ಗಣನೆಗೆ ತೆಗೆದುಕೊಂಡರೆ, ಅವರೊಬ್ಬ ಅಂತರ್ಮುಖಿಯಾಗಿರದೆ ಬಹಿರ್ಮುಖಿ ಬಂಡಾಯಗಾರರಾಗಿದ್ದರು. ದಿಟ್ಟ ನೇರ ಹಾಗೂ ಸತ್ಯಾಂಶಗಳನ್ನೊಳಗೊಂಡ ವೈಚಾರಿಕ ಮನೋಭಾವನೆಗಳು ಅವರ ಸಮಗ್ರ ಸಾಹಿತ್ಯದಲ್ಲಿವೆ. ನಿಷ್ಪಕ್ಷಪಾತ ಧೋರಣೆಯೊಂದಿಗೆ ಕಂಡದ್ದನ್ನು ಕಂಡ ಹಾಗೆ, ಕೇಳಿದ್ದನ್ನು ಕೇಳಿದ ಹಾಗೆ ಆಡಬೇಕಾದುದನ್ನು ಆಡಿಯೇ ತಿರುವ ಸ್ವಭಾವವನ್ನು ಕನಕದಾಸರ ಸಾಹಿತ್ಯದಲ್ಲಿ ಕಂಡುಕೊಳ್ಳಬಹುದು. ಕನಕದಾಸರು ಮೌನ ಸ್ವಭಾವದವರಾಗಿದ್ದರೂ ಅಂದಿನ ಬ್ರಾಹ್ಮಣರ ಅನಿಷ್ಟತೆ ಹಾಗೂ ಅನಾಚಾರಗಳ ವಿಷಯ ಬಂದಾಗ ತಮ್ಮ ಮೌನ ಮುರಿದು ಕಠೋರವಾಗುತ್ತಿದ್ದರು. ಸತ್ಯದ ಶೋಧನೆಯಲ್ಲಿ ನಿಷ್ಣಾತರಾಗಿದ್ದ ಕನಕದಾಸರು ಸತ್ಯದ ಪಕ್ಷಪಾತಿಗಳಾಗಿದ್ದರು. ಯಾವ ಧರ್ಮದವರೇ ಆಗಿರಲಿ ಅವರಿಗೆ ಬಂಧುಗಳೇ ಆಗಿರುತ್ತಿದ್ದರು. ಒಳ್ಳೆಯದನ್ನು ಸಂರಕ್ಷಿಸುವ ಮತ್ತು ಕೆಟ್ಟದ್ದನ್ನು ಸುಟ್ಟು ಹಾಕುವ ಸ್ವಭಾವ ಅವರದಾಗಿತ್ತು. ಅವರು ಒಂದು ಕೋಮಿಗಾಗಲಿ, ಅಥವಾ ಸಮುದಾಯಕ್ಕೆ ಕಟ್ಟು ಬಿದ್ದವರಲ್ಲ. ಎಲ್ಲ ಕೋಮಿನ ನದಿಗಳನ್ನೂ ಧರ್ಮವೆಂಬ

ಸಮುದ್ರಕ್ಕೆ ಸೇರಿಸಲು ಪ್ರಯತ್ನಿಸಿದವರಾಗಿದ್ದರು. ಇದಕ್ಕೆ ತದ್ವಿರುದ್ಧವಾಗಿ ಬ್ರಾಹ್ಮಣರು ತಮ್ಮ ಜಾತಿ, ಕುಲ, ಗೋತ್ರದ ಪರಿಧಿಯಲ್ಲಿಯೇ ಇದ್ದು ಇತರರನ್ನು ತುಚ್ಛರೆಂದು ಭಾವಿಸಿದ್ದರು. ಮಾನವತೆಯ ಅಖಂಡತೆಯನ್ನು ಸಾಧಿಸುವ ಕಡೆಗೆ ಕನಕದಾಸರು ಜನರನ್ನು ಹುರಿದುಂಬಿಸಿ ಕರೆದೊಯ್ದರು. ಆತ್ಮವಿಶ್ವಾಸದಿಂದ ಸಮಾಜದಲ್ಲಿ ನಿರ್ಭಯವಾಗಿ ಜೀವಿಸಲು ಮಾರ್ಗದರ್ಶನ ಮಾಡಿದರು. ಜಾತಿ ಎಂಬ ಪೆಡಂಭೂತವನ್ನು ನಿಮ್ಮ ಭಾವನೆಯಿಂದ ಕಿತ್ತೆಸೆದಾಗ ನೀತಿಯ ನೆಲೆ ಕಂಡುಕೊಳ್ಳಬಹುದು. ಢಾಂಬಿಕತೆಯಿಂದ ಮುಕ್ತಿಮಾರ್ಗ ದೊರಕುವುದು ಅಸಾಧ್ಯ ಎಂದರು.

ಕನಕದಾಸರು ಸಮಾನತೆ ಸಾಧಿಸುವ ನಿಟ್ಟಿನತ್ತ ಸಾಗಿ ಪರಸ್ಪರರಲ್ಲಿ ಒಮ್ಮತ ಮೂಡಿಸಿ ಬದುಕಲು ಹೇಳಿದ್ದು ವಿಶೇಷ. ಸಾಮಾಜಿಕ ವೈಮನಸ್ಸು ಶಾಶ್ವತ ದ್ವೇಷದ ತಳಹದಿ. ಇದರಿಂದ ದೂರವಿರಲು ಸಲಹೆಯಿತ್ತರು. ಅವರ ದಲಿತ ಬಂಡಾಯದ ದನಿ ಕ್ರಾಂತಿಯ ಕಹಳೆಯಾಗಿ ಮೊಳಗಿತು. ಅವರು ರಚಿಸಿದ ರಾಮಧಾನ್ಯ ಚರಿತ್ರೆ ಇದಕ್ಕೆ ಪ್ರಮುಖ ಉದಾಹರಣೆಯಾಗಿದೆ. ಹೊಲೆಯನು ಯಾರು? ಎಂಬ ಪ್ರಶ್ನೆಯೊಂದಿಗೆ ವೃತ್ತಿಗನುಸಾರವಾಗಿ ಕೆಳಸ್ತರದ ಕೆಲಸ ಮಾಡುವವರಾಗಲಿ, ಚಪ್ಪಲಿಗಳನ್ನು ಹೊಲೆಯುವವರು ಮಾತ್ರ ಹೊಲೆಯರಲ್ಲ. ಸಾಮಾಜದ ಸ್ವಾಸ್ತ್ಯವನ್ನು ಕದಡಲು ಪ್ರಯತ್ನಿಸಿ ದ್ವೇಷಕ್ಕೆ ಕಾರಣವಾಗುವವರೇ ಹೊಲೆಯರು ಎಂದು ಕನಕದಾಸರು ಹೇಳಿದ್ದಾರೆ. ಯಾವುದೇ ವೃತ್ತಿಯನ್ನು ಕೀಳೆಂದು ಭಾವಿಸದ ಕನಕದಾಸರು ವೃತ್ತಿ ತಾರತಮ್ಯ ಬಯಸದೆ ಕೆಳವೃತ್ತಿಯ ಶೂದ್ರರನ್ನು ಗೌರವದಿಂದ ಕಾಣುತ್ತಾರೆ.

**ಕೊನೆ ಟಿಪ್ಪಣಿಗಳು :**

1. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 202, ಪುಟ 190, ಪ್ರೊ. ಸುಧಾಕರ.
2. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 201, ಪುಟ 188, ಪ್ರೊ. ಸುಧಾಕರ.

***

## ಅಧ್ಯಾಯ 2

# ಕನಕದಾಸರ ಸಂಕೀರ್ತನೆಗಳಲ್ಲಿ ಸಾಮಾಜಿಕ ಪ್ರಜ್ಞೆ

ಕನಕದಾಸರು ಜೀವಿಸಿದ್ದ ಹದಿನಾರನೆಯ ಶತಮಾನದ ಸಂದರ್ಭವು ಸಾಮಾಜಿಕ ಅನಿಷ್ಠತೆ ಹಾಗೂ ಅರಾಜಕತೆಯಿಂದ ತುಂಬಿಕೊಂಡಿತ್ತು. ಜನರು ಪರಸ್ಪರ ನಂಬಿಕೆ ವಿಶ್ವಾಸ ಹಾಗೂ ಸತ್ಯಾಸತ್ಯತೆಗಳ ಬಗ್ಗೆ ಅರಿಯದವರಾಗಿದ್ದರು. ಜನರು ಆಂತರಿಕ ಕಲಹದೊಂದಿಗೆ ಒಬ್ಬ ಇನ್ನೊಬ್ಬನನ್ನು ಅಸಹನೆಯಿಂದ ಕಂಡು ಪಾಶವೀ ಕೃತ್ಯದಲ್ಲಿ ತೊಡಗಿದ್ದರು. ಪುರೋಹಿತ ವರ್ಗದವರು ಇಲ್ಲಸಲ್ಲದ ನೇಮ ನಿಷ್ಠೆಗಳನ್ನು ಸೃಷ್ಟಿಸಿ ಜನರ ಮನಸ್ಸಿನಲ್ಲಿ ಮೌಢ್ಯತೆ ತುಂಬಿ ಮುಗ್ಧ ಜನರನ್ನು ಹಾದಿ ತಪ್ಪಿಸುತ್ತಿದ್ದರೆಂಬುದಕ್ಕೆ ಕನಕದಾಸರ ಅನೇಕ ಕೀರ್ತನೆಗಳು ನಿದರ್ಶನವಾಗಿದೆ.

ಅಂದಿನ ಜನರಲ್ಲಿ ಜ್ಞಾನದ ಕೊರತೆಯ ಕಾರಣದಿಂದಲೇ ಸಾಮಾಜವು ವೈಷಮ್ಯದಿಂದ ಕೂಡಿತ್ತು. ಮೇಲು–ಕೀಳುಗಳೆಂಬ ಭಾವನೆಯೊಂದಿಗೆ ಜಾತೀಯತೆ ತಾಂಡವವಾಡುತ್ತಿತ್ತು. ಸ್ತ್ರೀಶೋಷಣೆ ನಿರಂತರವಾಗಿತ್ತು. ಮೇಲ್ವರ್ಗದವರು ತಮ್ಮ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡಬೇಕೆಂಬ ಪ್ರಜ್ಞೆ ಇಲ್ಲದಿರುವುದನ್ನು ಕನಕದಾಸರು ಹತ್ತಿರದಿಂದ ಕಂಡರು. ಧನಿಕರು ಬಡವರನ್ನು ಹಗಲಿರುಳು ಗಾಣದೆತ್ತಿನಂತೆ ದುಡಿಸಿಕೊಂಡು ಕೆಲಸಕ್ಕೆ ತಕ್ಕ ಪ್ರತಿಫಲ ನೀಡದ ನಿರ್ದಯಿಗಳಾಗಿದ್ದರು. ಇದನ್ನು ಕಂಡು ಕನಕದಾಸರು ದುರ್ಬಲರಿಗೆ ನ್ಯಾಯ ಸಿಗುವಂತೆ ಒತ್ತಾಯಿಸಿ ಕೀರ್ತನೆಗಳನ್ನು ರಚಿಸಿದರು.

ಜನರನ್ನು ಮೋಸಗೊಳಿಸಿ ಅಕ್ರಮವಾಗಿ ಹಣ ಗಳಿಸುತ್ತಿದ್ದ ಅಂದಿನ ಕೆಲ ಸ್ಥಿತಿವಂತರು ಸ್ವಾರ್ಥಿಗಳಾಗಿದ್ದರು. ಜನರಲ್ಲಿ ಸತ್ಯ ವಿಶ್ವಾಸ ಎಂಬುದು ಮರೀಚಿಕೆಯಾಗಿ ನಯವಂಚಕರು ಅಸತ್ಯದ ದಾರಿಯಲ್ಲಿ ನಡೆದು ಸಮಾಜದಲ್ಲಿ ಸತ್ಯವಂತರನ್ನು ಪೀಡಿಸುತ್ತಿದ್ದರೆಂಬುದಕ್ಕೆ ಈ ಕೆಳಗಿನ ಕೀರ್ತನೆಯೇ ಸಾಕ್ಷಿ:

ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ
ನಿತ್ಯಜ್ಞಾನಿಯಾದ ಮೇಲೆ ಚಿಂತೆ ಯಾತಕೆ[1]

ಅಜ್ಞಾನದಿಂದ ಕೂಡಿದ ದುರುಳರಿಂದ ಅಮಾಯಕರು ಮೋಸ ಹೋಗುತ್ತಿದ್ದರು. ಮೇಲ್ವರ್ಗದವರನ್ನು ಕೆಳವರ್ಗದವರು ಸಮಸ್ಯೆಗಳಿಗೆ ಪರಿಹಾರ ಕೇಳಿದರೆ ಅದನ್ನು ತಿರಸ್ಕರಿಸಿ ಬಿಡುತ್ತಿದ್ದರು. ಅಂದು ಸತ್ಯದ ಮಾರ್ಗ ಕಠಿಣವಾಗಿತ್ತು. ಆ ಕಠಿಣ ಮಾರ್ಗವನ್ನು ಸರಳಗೊಳಿಸಲು ಕನಕದಾಸರು ಆಹೋರಾತ್ರಿ ಶ್ರಮಿಸಿದರು:

ತಾನು ಉಣ್ಣದ ಪರರಿಗಿಕ್ಕದ ಧನವಿದ್ಯಾತಕೆ
ಮಾನ ಹೀನನಾಗಿ ಬಾಳ್ವ ಮನುಜನ್ಯಾತಕೆ[2]

ಅಕ್ರಮವಾಗಿ ಗಳಿಸಿದ ಹಣವನ್ನು ಕೆಲ ಸಿರಿವಂತರು ಸ್ವತಃ ಖರ್ಚು ಮಾಡದೆ, ಬೇರೊಬ್ಬರ ಸಹಾಯಕ್ಕೆ ಉಪಯೋಗಿಸದೆ ಜಿಪುಣತನ ಹೊಂದಿದ್ದರು. ಅಂಥ ಹಣವಿದ್ದೂ ವ್ಯರ್ಥ ಎಂಬುದು ಕನಕದಾಸರ ಭಾವನೆಯಾಗಿತ್ತು. ಅಂದರೆ ಸ್ಥಿತಿವಂತರೆಂದೆನಿಸಿಕೊಳ್ಳುವ ಮೇಲ್ವರ್ಗದವರು ತಮ್ಮಲ್ಲಿ ಸಾಕಷ್ಟು ಧನ ಕನಕ, ದವಸ ಧಾನ್ಯಗಳಿದ್ದರೂ ಅವುಗಳನ್ನು ಇಲ್ಲದ ಬಡವರಿಗೆ ಕೊಡುವ ವಿಚಾರ ಮಾಡದೇ ಇರುವುದನ್ನು ಕನಕದಾಸರು ಕಂಡು ತಮ್ಮ ಕೀರ್ತನೆಗಳ ಮುಖಾಂತರ ಉಳ್ಳವರಲ್ಲಿ ಪರೋಪಕಾರ ಮನೋಭಾವನೆ ಮೆರೆಸುವಂತೆ ಸಲಹೆ ನೀಡಿದ್ದಾರೆ.

ಕನಕದಾಸರ ಜೀವಿತಾವಧಿಯಲ್ಲಿ ವಿಜಯನಗರ ಸಾಮ್ರಾಜ್ಯವು ಅತ್ಯಂತ ವಿಜೃಂಭಣೆಯಿಂದ ರಾಜ್ಯಾಧಿಕಾರ ನಡೆಸಿತ್ತು. ಇದು ಇತಿಹಾಸದಿಂದ ತಿಳಿದು ಬರುವ ವಿಷಯವಾಗಿದೆ. ಕೃಷ್ಣದೇವರಾಯನ ತರುವಾಯ ಅಧಿಕಾರಕ್ಕೆ ಬಂದ ಅರಸರು ರಾಜಕೀಯ ಹಿಡಿತವನ್ನು ಸಡಿಲಗೊಳಿಸಿದರು. ಅವರ ಅಧಿಕಾರಿ ವರ್ಗವು ಹಾಗೂ ಸೈನಿಕರು ಅಧರ್ಮದ ನೀತಿ ಅನುಸರಿಸಿರಿ ರಾಜರಿಗೆ ಮೋಸಗೊಳಿಸುತ್ತಿದ್ದುದನ್ನು ಕನಕದಾಸರು ಕೀರ್ತನೆಗಳ ಮುಖಾಂತರ ಖಂಡಿಸಿದ್ದಾರೆ:

ನೀತಿಯರಿತು ನಡೆಯದಿರುವ ಬಂಟನ್ಯಾತಕೆ
ಮನ್ನಣೆಂದ ನಡೆಸದಿರುವ ದೊರೆಯು ಯಾತಕೆ[3]

ನೈತಿಕತೆ ಕಳೆದುಕೊಂಡ ಸೈನಿಕರು ರಾಜರಿಗೆ ಮೋಸ ಮಾಡಿ ರಾಜ್ಯದ ಅವಸಾನಕ್ಕೆ ಕಾರಣವಾಗುವ ಸೈನಿಕರು ಇದ್ದೂ ಫಲವಿಲ್ಲವೆಂದು ಸೈನಿಕರನ್ನು ಎಚ್ಚರಿಸಿದ್ದಾರೆ. ದೊರೆಗಳೂ ತನ್ನ ರಾಜ್ಯಭಾರವನ್ನು ಮನ್ನಣೆಯೊಂದಿಗೆ ನಡೆಸಿ ಪ್ರಜೆಗಳ ಹಿತ ಕಾಪಾಡದಿದ್ದರೆ ಆತನ ದೊರೆತನವು ಯಾವುದೇ ಗೌರವಕ್ಕೆ ಪಾತ್ರವಾಗುವುದಿಲ್ಲ ಎಂದು ರಾಜರ ವಿಲಾಸಿ ಜೀವನವನ್ನು ಟೀಕಿಸಿದ್ದಾರೆ. ಅಂದರೆ ಕನಕದಾಸರು ಒಬ್ಬ ಡಣಾಯಕನಾಗಿ ನಿಷ್ಠೆಯಿಂದ ಸೇವೆ ಸಲ್ಲಿಸಿದ್ದರೆಂಬುದು ಈ ಕೀರ್ತನೆ ಹೇಳುತ್ತದೆ.

ಕನಕದಾಸರ ಸಾಮಾಜಿಕ ಕಳಕಳಿಯ ಬಗ್ಗೆ ಸೂಕ್ಷ್ಮವಾಗಿ ಚರ್ಚಿಸಬೇಕಾದರೆ ಸರ್ವರೂ ಸಮಾನ ಸ್ಥಾನಮಾನದೊಂದಿಗೆ ಗೌರವಯುತವಾಗಿ ಬಾಳಬೇಕೆಂಬುದೇ ಅವರ ನಿಲುವಾಗಿತ್ತು. ರಾಜರಲ್ಲಿಯ ನಿರ್ಲಕ್ಷ ಆಡಳಿತ ವೈಖರಿಯನ್ನು ಸುಧಾರಿಸಲು ಕನಕದಾಸರು ಕೀರ್ತನೆಗಳ ಮುಖಾಂತರ ಅರಸರನ್ನು ಎಚ್ಚರಿಸಿರುವುದು ಪ್ರಮುಖವಾಗಿ ಎದ್ದು ಕಾಣುತ್ತಿದೆ.

ಕನಕದಾಸರು ಸಮಾಜದ ಜನರಲ್ಲಿಯ ಅಜ್ಞಾನವನ್ನು ಹೋಗಲಾಡಿಸಲು ಶತಪ್ರಯತ್ನ ಮಾಡಿದರು ಉನ್ನತ ವರ್ಗದವರು ತಮ್ಮ ಜ್ಞಾನದ ನೆಲೆಗಟ್ಟನ್ನು ಕಾಣದೇ ಶಾಶ್ವತವಾಗಿ ಅಜ್ಞಾನದ ಅಂಧಕಾರದಲ್ಲಿ ಮುಳುಗಿದವರಾಗಿದ್ದರು. ಮೇಲ್ವರ್ಗದವರು ಕೆಳವರ್ಗದವರ ಬಗ್ಗೆ ತೋರುವ ಕೀಳರಿಮೆ ಅಜ್ಞಾನದ ಪರಮಾವಧಿ ಎಂದರು. ಕನಕದಾಸರು ವೈಷ್ಣವರಿಗೆ ಪರಿಪರಿಯಾಗಿ ಐಕ್ಯತೆಯ ಬಗ್ಗೆ ತಿಳಿಸಿ ಹೇಳಿದ ನಿದರ್ಶನಗಳು ಕೀರ್ತನೆಗಳಲ್ಲಿ ಸಾಕಷ್ಟಿವೆ. 'ಆನೆ ನಡೆದದ್ದೆ ದಾರಿ' ಎಂಬಂತೆ ಮೇಲ್ವರ್ಗದವರು ತಾವಂದುಕೊಂಡದ್ದೆ ಸತ್ಯ, ತಾವು ಮಾಡುವ ಆಚರಣೆಗಳೇ ಸರಿಯಾದವು ಎಂದು, ಉಳಿದವುಗಳೆಲ್ಲ ಮಿಥ್ಯ ಮತ್ತು ಆಚರಣೆಗೆ ಸಲ್ಲಲಾರವು ಎಂದು ತಮ್ಮನ್ನು ತಾವೇ ಸಮರ್ಥಿಸಿಕೊಂಡರು. ಯಾವುದೇ ಸುಜ್ಞಾನಿಗಳ ಸಲಹೆಗಳನ್ನು ತಿರಸ್ಕರಿಸುವವರಾಗಿದ್ದರು. ಆದ್ದರಿಂದಲೇ ಅವರು ಕನಕದಾಸರ ಕಾಲದಿಂದ ಹಿಡಿದು ಇಂದಿನವರೆಗೂ ತಮ್ಮ ಮೌಢ್ಯಚರಣೆಗಳೊಂದಿಗೆ ಅಜ್ಞಾನ ಪ್ರದರ್ಶಿಸುತ್ತ ಬಂದಿದ್ದಾರೆ. ಮಾನವ ಜೀವನದ ಸಫಲತೆ ಹಾಗೂ ಮುಕ್ತಿಯ ಮಾರ್ಗ ಕಂಡುಕೊಳ್ಳುವುದು ದೃಢಭಕ್ತಿ ಹಾಗೂ ನೈಜತನದಿಂದ ಎಂದರು ಕನಕದಾಸರು. ಅಜ್ಞಾನಂಧಕಾರದಲ್ಲಿ ಮುಳುಗಿದ್ದವರನ್ನು ಮುಖ್ಯವಾಹಿನಿಗೆ ತರಲು ಅವರು ಮಾಡಿದ ಪ್ರಯತ್ನ ಆರೋಗ್ಯಕರ ಚಿಂತನೆಯಾಗಿದೆ.

'ನಾಯಿಯ ಬಾಲ ಡೊಂಕು' ಎಂಬಂತೆ ಕೆಲ ವೈದಿಕರು ಕನಕದಾಸರ ಉಪದೇಶವನ್ನು ಒಪ್ಪಿ ತಮ್ಮ ತಪ್ಪುಗಳನ್ನು ತಿದ್ದಿಕೊಳ್ಳುವ ಪ್ರಯತ್ನ ಮಾಡಲಿಲ್ಲ. ತಾವು ಮಾಡುವುದು ತಪ್ಪೆಂದು ಗೊತ್ತಿದ್ದರೂ ಶೂದ್ರನಾದ ಕನಕದಾಸನ ಉಪದೇಶಗಳಿಗೆ ತಲೆಬಾಗುವುದೆಂದರೆ ಬ್ರಾಹ್ಮಣ್ಯಕ್ಕೆ ಅಗೌರವ ಎಂದು ಭಾವಿಸಿದ್ದರು. ಕನಕದಾಸರ ಮಾರ್ಗದರ್ಶನದ ನುಡಿಗಳು ಅರ್ಥಪೂರ್ಣವಾದವುಗಳಲ್ಲವೆಂದು ತಿರಸ್ಕರಿಸಿದರು. ಕನಕದಾಸರು ಜ್ಞಾನವಿಹೀನ ಜನರಿಗೆ ಎಷ್ಟು ಉಪದೇಶಿಸಿದರೂ ಅದು ನೀರಲ್ಲಿ ಹುಳಿ ಹಿಂಡಿದಂತೆ, ಗುಡ್ಡಕ್ಕೆ ಕಲ್ಲು ಹೊತ್ತಂತೆ ಎಂದು ಅಜ್ಞಾನಿಗಳ ಜೊತೆಗೆ ವಾದಿಸುವುದು ನಾಯಿಯ ಬಾಲಕ್ಕೆ ಕೊಳವೆ ಹಾಕಿದಂತೆ ಎಂದರು:

ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡೆ ಜಗಳವೇ ಲೇಸು[4]

ಕನಕದಾಸರ ಈ ಹೇಳಿಕೆಯ ಪ್ರಕಾರ ಯಾವ ಮನುಷ್ಯರು ಬೌದ್ಧಿಕ ಹಾಗೂ ಆಧ್ಯಾತ್ಮಿಕ ಜ್ಞಾನವನ್ನು ಹೊಂದಿರುವುದಿಲ್ಲವೋ ಅವರಿಗೆ ಜ್ಞಾನದ ಬೆಲೆಯೇ ಗೊತ್ತಿರುವುದಿಲ್ಲ. ತಮ್ಮ ಮನಬಂದಂತೆ ನಡೆಸುವ ಆಚರಣೆಗಳನ್ನೇ ಸರಿ ಎಂದು ಭಾವಿಸುತ್ತಾರೆ. ಯಾರ ಉಪದೇಶವನ್ನೂ ಅವರು ಒಪ್ಪಲಾರರು. ಅಂಥವರೊಂದಿಗೆ ಗೆಳೆತನ ಮಾಡಿದರೆ ಜ್ಞಾನಿಯೂ ಅಜ್ಞಾನದ ಅಂಧಕಾರಕ್ಕೆ ಸಿಲುಕುವ ಪ್ರಸಂಗ ಬರುತ್ತದೆ ಎಂದಿದ್ದಾರೆ ಕನಕದಾಸರು. ಸುಜ್ಞಾನಿಗಳ ಕೂಡ ಜಗಳವಾಡಿದರೂ ಅವರಿಂದ ಅಪಾರವಾದ ಜ್ಞಾನ ಪಡೆಯಬಹುದು ಎಂಬುದು ಕನಕದಾಸರ ನಿಲುವು.

ಸುಜ್ಞಾನಿಗಳಾದವರು ಎಲ್ಲ ವಿಷಯಗಳ ಬಗ್ಗೆ ಅರಿತವರಾಗಿರುತ್ತಾರೆ. ಅಂಥ ಸುಜ್ಞಾನಿಗಳ ಜೊತೆಗೆ ತರ್ಕಕ್ಕಿಳಿದು ನಾವೂ ಕೂಡ ಅವರಿಂದ ಅಪಾರ ಜ್ಞಾನ ಸಂಪಾದನೆ ಮಾಡಿಕೊಳ್ಳಲು ಸಾಧ್ಯವೆನಿಸುತ್ತದೆ. ಆದ್ದರಿಂದ ಕನಕದಾಸರು ತಮ್ಮ ಕೀರ್ತನೆಯ ಸಾಲಿನಲ್ಲಿ 'ಸುಜ್ಞಾನಿಗಳ ಕೂಡೆ ಜಗಳವೇ ಲೇಸು' ಎಂದು ಹೇಳಿದ್ದಾರೆ. ಕನಕದಾಸರ ವಿಚಾರಧಾರೆಗಳನ್ನು ಅವಲೋಕಿಸಿದರೆ ಅಂದಿನ ಕಾಲದಲ್ಲಿ ಕೇವಲ ಅಜ್ಞಾನಿಗಳೇ ಇದ್ದರೆಂದಲ್ಲ. ಸುಜ್ಞಾನಿಗಳೂ ಅಲ್ಲಲ್ಲಿ ಇದ್ದರೆಂಬುದು ಗೊತ್ತಾಗುತ್ತದೆ.

ಕನಕದಾಸರು ಸಮಾಜದ ಯಾವೊಬ್ಬ ಮನುಷ್ಯನೂ ಪರಾವಲಂಬಿಯಾಗಿ ಜೀವಿಸುವುದನ್ನು ವಿರೋಧಿಸುತ್ತಾರೆ. ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಬ್ಬನಿಗೂ ದುಡಿದು ತಿನ್ನುವ ಯೋಗ್ಯತೆ ಇರಬೇಕು. ಪರಾವಲಂಬಿ ಜೀವನ ನಡೆಸಿ ಸಮಾಜದಲ್ಲಿ ಅಗೌರವಕ್ಕೆ ತುತ್ತಾಗಬಾರದು. ಗುಲಾಮಗಿರಿಯಂಥ ಪರಾವಲಂಬಿ ಜೀವನ ಮಾನವೀಯತೆಗೆ ಕಳಂಕ. ಜೀವನದಲ್ಲಿ ಕಷ್ಟ ನಷ್ಟಗಳು, ಉಡುವ-ಉಣ್ಣುವ ಸಂದರ್ಭದಲ್ಲಿ ಕೊರತೆಗಳು ಬರುವುದು ಸಹಜವಾದವುಗಳು. ಅವುಗಳನ್ನೇ ಆಧಾರವಾಗಿಟ್ಟುಕೊಂಡು ಉಳ್ಳವರ ಮುಂದೆ ಕೈಚಾಚುವುದು ಅವಮಾನಕರ ಎಂದಿದ್ದಾರೆ ಕನಕದಾಸರು. ದಟ್ಟ ದರಿದ್ರರಾದವರೂ ಕೂಡಾ ಉಳ್ಳವರ ಮುಂದೆ ಕೈಚಾಚಿ ಅವಮಾನಕ್ಕೊಳಗಾಗುವ ಬದಲು ಊರೂಳಗೆ ಭಿಕ್ಷೆ ಬೇಡಿ ಬದುಕುವುದು ಒಳಿತು ಎನ್ನುತ್ತಾರೆ.

ಹರಿದಾಸರ ಕೂಡ ಸಂಭಾಷಣೆಯೊಂದಿಗೆ ಜ್ಞಾನ ಗಳಿಸುವ ಪರಿಯನ್ನು ಬೋಧಿಸತ್ತ ಹರಟೆ ಹೊಡೆದು ಜೀವನವನ್ನು ನಿರರ್ಥಕಗೊಳಿಸುವುದನ್ನು ಹೀಗೆ ವಿರೋಧಿಸುತ್ತಾರೆ:

ಉಂಬುಡುವುದಕಿಲ್ಲರಸಿನೋಲಗಕಿಂತ
ತುಂಬಿದೂರೊಳಗೆ ತಿರಿದುಂಬುವುದೆ ಲೇಸು
ಹಂಬಲಿಸಿ ಹಾಳ್ಹರಟೆ ಹೊಡೆಯುವುದಕಿಂತ- ಹರಿ
ಯೆಂಬ ದಾಸರ ಕೂಡೆ ಸಂಭಾಷಣೆಯೇ ಲೇಸು[5]

ಕನಕದಾಸರು ಮುಂದೆ ನೀಡಿ, ಹಿಂದೆ ಹಂಗಿಸುವವರನ್ನು ಟೀಕಿಸಿ ಉಳ್ಳವರ ತೋರಿಕೆಯ ದಾನವನ್ನು ಒಪ್ಪದವರಾಗಿದ್ದಾರೆ. ದಾನವು ನಿಸ್ವಾರ್ಥದಿಂದ ಕೂಡಿರಬೇಕೇ ವಿನಃ ಮುಂದೆ ಕೊಟ್ಟು ಹಿಂದೆ ಹಂಗಿಸಿದರೆ ಅದು ಭಗವಂತನಿಗೆ ಪ್ರಿಯವಾಗಲಾರದು. ಹಸಿದವನಿಗೆ ನೀಡಿದ ಅನ್ನವು ಪುಣ್ಯದ ಪ್ರತೀಕವಾಗಿದೆಯೇ ಹೊರತು ಯಾವುದೇ ಹೆಸರು ಗಳಿಸಲಿಕ್ಕಿಲ್ಲ. ಅಂಥ ಹಂಗಿನ ಅನ್ನವನ್ನು ಸೇವಿಸುವುದಕ್ಕಿಂತ ನೀರು ಕುಡಿದು ಹಾಯಾಗಿರಬಹುದೆಂದು ಇಲ್ಲದವರನ್ನು ಸಂತೈಸುವ ಕೆಲಸವನ್ನು ಕನಕದಾಸರು ಮಾಡಿದ್ದಾರೆ.

ತನ್ನ ಬಂಧು-ಬಾಂಧವರೊಂದಿಗೆ ಜಗಳಕ್ಕಿಳಿದು ಪರಸ್ಪರರ ನೆಮ್ಮದಿಗೆ ಭಂಗ ತಂದುಕೊಳ್ಳುವುದು ತರವಲ್ಲವೆಂಬುದು ಕನಕದಾಸರ ನಿಲುವು. ಸಮಾಜದ ಬಾಂಧವರಲ್ಲಿ ಐಕ್ಯತೆ ಮತ್ತು ಪ್ರೇಮಗಳನ್ನು ಬೆಳೆಸಲು ಅವರು ಪ್ರಯತ್ನ ಮಾಡಿದ್ದಾರೆ. ಅಂದರೆ ಅವರ

ಕಾಲಾವಧಿಯಲ್ಲಿ ಸಮಾಜದ ಜನರು ತಮ್ಮ ತಮ್ಮಲ್ಲಿ ದ್ವೇಷಾಸೂಯೆಯಿಂದ ಜಗಳಕ್ಕಿಳಿದು ಸಮಾಜದಲ್ಲಿ ಶಾಂತಿ ಕದಡಲು ಕಾರಣವಾಗುತ್ತಿದ್ದರೆಂಬುದು ಅವರ ಕೀರ್ತನೆಗಳ ಸಾಲಿನಲ್ಲಿ ಸ್ಪಷ್ಟವಾಗುತ್ತದೆ. ಬಾಂಧವರಲ್ಲಿ ಒಡಕು ಕಂಡುಬಂದಲ್ಲಿ ಕಡಿದಾಡುವುದರ ಬದಲು ಅಡವಿಯೊಳಗೆ ಅಜ್ಞಾತವಾಗಿ ವಾಸಿಸುವುದರೊಂದಿಗೆ ನೆಮ್ಮದಿಯ ಜೀವನವನ್ನು ಸಾಗಿಸುವುದು ಒಳಿತೆಂದು, ಸಮಾಜದ ಬಾಂಧವರನ್ನುದ್ದೇಶಿಸಿ ಹೀಗೆ ಹೇಳಿದ್ದಾರೆ:

ಒಡನೆ ಹಂಗಿಸುವನೋಗರವನುಂಬುವುದಕ್ಕಿಂತ
ಕುಡಿ ನೀರು ಕುಡಿದುಕೊಂಡಿರುವುದೇ ಲೇಸು

ಬಿಡದೆ ಬಾಂಧವರೊಡನೆ ಕಡಿದಾಡುವುದಕ್ಕಿಂತ
ಅಡವಿಯೊಳಗಜ್ಞಾತ ವಾಸವೇ ಲೇಸು[6]

ಎಂದು ಕನಕದಾಸರು ಅಸಹಾಯಕರಾಗಿದ್ದರೂ ಹಂಗಿನ ಅನ್ನದ ನಿರೀಕ್ಷೆಯಿಂದ ದೂರ ಸರಿದು ತನಿಚ್ಛೆಯಂತೆ ನೀರು ಕುಡಿದುಕೊಂಡಾದರು ಬದುಕಬೇಕು. ಮತ್ತು ಬಂಧು-ಬಾಂಧವರೆಂಬ ಪ್ರೀತಿ ಪರಸ್ಪರರಲ್ಲಿ ಇದ್ದರೆ ಅಲ್ಲಿ ಒಡನಾಟ ಸಾಧ್ಯವಾದೀತು. ದ್ವೇಷದೊಂದಿಗೆ ಬಾಂಧವರೊಡನೆ ಕಚ್ಚಾಡುವುದರಿಂದ ಮನಸ್ತಾಪವಾಗಿ ಜೀವನದ ಮುಂದಿನ ದಿನಗಳು ಕಷ್ಟಮಯವಾಗಬಹುದೆಂದು ಅರುಹಿದರು.

ಕನಕದಾಸರು ಕಂಡ-ಕಂಡ ಕಲ್ಲುಗಳನ್ನು ಪೂಜಿಸಿ ವೃಥಾ ಕಾಲಹರಣ ಮಾಡುವ ಜನರನ್ನುದ್ದೇಶಿಸಿ 'ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು' ಎಂದಿದ್ದಾರೆ. ಅಂದರೆ ಭಗವಂತನು ನೆನೆದವರ ಮನದಲ್ಲಿರುವಾಗ ಆತನನ್ನು ಕಂಡ-ಕಂಡ ಕಲ್ಲುಗಳಲ್ಲಿ ಕಾಣುವ ಪ್ರಯತ್ನ ಮೂರ್ಖತನದ್ದು ಎಂಬುದನ್ನು ಸಮಾಜಕ್ಕೆ ತಿಳಿಸಿದ್ದಾರೆ. ಸಾಧ್ಯವಾದಷ್ಟು ಆಧ್ಯಾತ್ಮದ ಬಲದಿಂದ ಭಗವಂತನ ಸಾಕ್ಷಾತ್ಕಾರಕ್ಕೆ ಪ್ರಯತ್ನಿಸಬೇಕೇ ವಿನಃ ಕಲ್ಲಿನಲ್ಲಿ ಭಗವಂತನಿದ್ದಾನೆ ಎಂಬುದನ್ನು ಒಪ್ಪುವುದಿಲ್ಲ. ಕನಕದಾಸರು ಅಂದಿನ ಕಾಲದ ಮೂಢನಂಬಿಕೆಯನ್ನು ಸಮಾಜದಿಂದ ಕಿತ್ತೆಸೆಯಲು ಪ್ರಾರಂಭಿಸಿದ್ದಾರೆ. ಕಲ್ಲನ್ನೇ ದೇವರೆಂದು ಪೂಜಿಸುವ ಪರಿ ಅಜ್ಞಾನದ ಸಂಕೇತವಾಗಿದ್ದು ಅಂಥ ಅಜ್ಞಾನಿಗಳ ಮೌಢ್ಯಾಚರಣೆಗಳಿಂದಲೇ ಸಮಾಜದಲ್ಲಿ ಮೂಢನಂಬಿಕೆ ಜೀವಂತಿಕೆ ಪಡೆದಿತ್ತೆಂಬುದನ್ನು ಕನಕದಾಸರ ಕೀರ್ತನೆಗಳು ಸ್ಪಷ್ಟಪಡಿಸುತ್ತವೆ. ತಾವು ಕಲಿತ ವಿದ್ಯೆ ಅಲ್ಪವೇ ಆಗಿದ್ದರೂ ಮಹಾಗರ್ವದಿಂದ ಮೆರೆಯುತ್ತ ತಮ್ಮಷ್ಟಕ್ಕೆ ತಾವೇ ಶ್ರೇಷ್ಠರು ಎಂದು ಬೀಗಿಕೊಳ್ಳುತ್ತಿದ್ದ ಜನರ ಭಾವನೆಗಳನ್ನು ಖಂಡಿಸಿ ಕವಿಗಳ ಶ್ರೇಷ್ಠತೆಯನ್ನು ಪ್ರಶ್ನಿಸುವ ಗೋಜಿಗೆ ಹೋಗಬಾರದೆಂಬುದು ಕನಕದಾಸರ ಸಲಹೆಯಾಗಿತ್ತು.

ಕನಕದಾಸರು ಶ್ರೇಷ್ಠ ಕವಿಗಳೆನಿಸಿ ಸಮಾಜದಲ್ಲಿ ಪ್ರತಿಯೊಬ್ಬರ ಮನೆ ಮಾತಾಗಿದ್ದರು. ಅಂಥ ಶ್ರೇಷ್ಠ ಕವಿಗಳ ಶ್ರೇಯಸ್ಸು ಅಂದಿನ ಕೆಲ ಉನ್ನತ ವರ್ಗದ ಜನರಿಗೆ ಅಸಹನೆಯುನ್ನುಂಟು ಮಾಡಿತ್ತು. ಕನಕದಾಸರ ವೇದವಾಕ್ಯಗಳು ಅವರಿಗೆ

ಅಪ್ರಿಯವಾಗಿದ್ದರಿಂದ ಅವರು ತಾವೇ ಶ್ರೇಷ್ಠರು ಎನಿಸುತ್ತಿದ್ದರು. ಕನಕನಿಗೆ ಕವಿಯಾಗಿ ಉಪದೇಶ ನೀಡುವ ಯಾ‌ವುದೇ ಅರ್ಹತೆ ಇಲ್ಲ. ಅವನೊಂದಿಗೆ ಬೆರೆತು ಇರುವುದು ತರವಲ್ಲವೆಂದು ವೈದಿಕರು ಜನರಿಗೆ ಹೇಳುತ್ತಿದ್ದರು. ವರಕವಿಗಳ ಮುಂದೆ ನಿಮ್ಮಂಥ ನರಕವಿಗಳ ಆಟ ಏನೂ ನಡೆಯದು. ಶ್ರೇಷ್ಠ ಕವಿಗಳನ್ನು ನಿಂದಿಸುವವನು ಶ್ರೇಷ್ಠನೆನಿಸಲಾರ. ತನ್ನ ಆತ್ಮವಿಶ್ವಾಸದೊಂದಿಗೆ ಶ್ರೇಷ್ಠ ಜ್ಞಾನ ಸಂಪಾದನೆಗೈಯುವ ಎಲ್ಲರೂ ಶ್ರೇಷ್ಠ ಕವಿಗಳಾಗಿ ಗುರುತಿಸಿಕೊಳ್ಳಬಹುದು. ಅದಕ್ಕೆ ಭಗವಂತನಲ್ಲಿ ದೃಢವಿಶ್ವಾಸ ಹಾಗೂ ಅಚಲ ಭಕ್ತಿಯೇ ಕಾರಣವಾದುದು. ನೆಪಕ್ಕೆ ಮಾತ್ರ ಕರ್ಮಠನಾಗಿ ವಿದ್ಯೆ ಸಂಪಾದನೆಗೆ ಪ್ರಯತ್ನಿಸಿದರೆ ಅದು ಸಾಧ್ಯವಾಗದ ಮಾತು ಎಂಬುದನ್ನು ಕನಕದಾಸರು ಮನವರಿಕೆ ಮಾಡಿದ್ದಾರೆ. ಅಂದರೆ ಅಂದಿನ ಮಠಿಕ ಶಿಷ್ಯವೃಂದದಲ್ಲಿ ಜ್ಞಾನ ಸಂಪಾದನೆ ಅತ್ಯಲ್ಪವಾಗಿತ್ತು. ಅದನ್ನೇ ದೊಡ್ಡದನ್ನಾಗಿ ತೋರಿಸಿ ಜನರ ಮುಂದೆ ಪ್ರತಿಷ್ಠೆ ಪಟ್ಟು ಗರ್ವಿಸುವ ಪರಿಯನ್ನು ಕೀರ್ತನೆಗಳು ಮಾರ್ಮಿಕವಾಗಿ ಹೇಳುತ್ತವೆ:

ವರ ಕವಿಗಳ ಮುಂದೆ ನರ ಕವಿಗಳು ವಿದ್ಯೆ ತೋರಬಾರದು. ಈ
ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು[7]

ಈ ಕೀರ್ತನೆಯ ಸಾಲುಗಳು ಕವಿಗಳನ್ನು ನಿಂದಿಸಲು ಪ್ರಯತ್ನಿಸುವ ಸ್ವಾರ್ಥಿಗಳಿಗೆ ಬೀಸಿದ ಚಾಟಿಯ ಏಟಾಗಿದೆ. ಅಂದರೆ ಕನಕದಾಸರ ಅಂದಿನ ಸಾಮಾಜಿಕ ಅನಿಷ್ಠತೆ ಹಾಗೂ ಅನಾಚಾರಗಳು ಅವರನ್ನು ಚಿಂತೆಗೀಡು ಮಾಡಿದ್ದವೆಂದು ತಿಳಿದು ಬರುತ್ತದೆ:

ಪಾಪಿಗಳಿದ್ದಲ್ಲಿ ರೂಪವುಳ್ಳ ವಸ್ತುವ ತೋರಬಾರದು– ಬಹು
ಕೋಪಿಗಳಿದ್ದಲ್ಲಿ ಅನುಭವಗೋಷ್ಠಿಯ ಮಾಡಬಾರದು[8]

ಮನುಷ್ಯನ ಒಳ್ಳೆಯತನವನ್ನು ಸ್ವೀಕರಿಸುವ ಬುದ್ಧಿ ಇಲ್ಲದ ಕಾರಣ ಅಂಥ ಮನುಷ್ಯರನ್ನು ಕನಕದಾಸರು ಪಾಪಿಗಳು ಎಂದಿದ್ದಾರೆ. ಪಾಪಿಗಳಿಗೆ ರೂಪವುಳ್ಳ ವಸ್ತುವನ್ನು ಪ್ರದರ್ಶಿಸಬಾರದೆಂದು ಜ್ಞಾನಿಗಳಿಗೆ ಕಿವಿ ಮಾತು ಹೇಳಿದ್ದಾರೆ. ಯಾವುದೇ ಸಂದರ್ಭದಲ್ಲಿ ಕೋಪಿಗಳ ಮುಂದೆ ಉಪದೇಶ ಮಾಡುವ ಪ್ರಯತ್ನ ಮಾಡಬಾರದು. ತಮ್ಮ ಜೀವನದಲ್ಲಿ ಅನುಭವಿಸಿದ ಘಟನೆಗಳನ್ನು ಆಧಾರವಾಗಿಟ್ಟು ಕೋಪಿಗಳ ಮುಂದೆ ಗೋಷ್ಠಿಗಿಳಿದರೆ ಅವರಲ್ಲಿ ಆಲಿಸುವ ಅಥವಾ ಕೇಳುವ ತಾಳ್ಮೆ ಇಲ್ಲದ ಕಾರಣ ಕಲಹಕ್ಕೆ ಇಳಿದು ನಿಮ್ಮನ್ನು ಅವಮಾನಿಸಬಹುದು. ಆದ್ದರಿಂದ ಅಂಥ ಕೋಪಿಗಳಿಂದ ದೂರವಿರಬೇಕು ಎನ್ನುತ್ತಾರೆ ಕನಕದಾಸರು.

ಹರಿ–ಹರ ಎಂಬ ಭೇದವೆಣಿಸದೇ ತಮ್ಮಿಷ್ಟದಂತೆ ತಮಗೆ ಬೇಕಾದ ದೇವರ ಆರಾಧನೆಯಲ್ಲಿ ತೊಡಗುವುದು ಉತ್ತಮವೆಂದು ಭಕ್ತಗಣವನ್ನುದ್ದೇಶಿಸಿ ಹೇಳಿದ್ದಾರೆ ಕನಕದಾಸರು. ಹರ ಮೇಲೆ ಹರಿ ಕೆಳಗೆ ಎಂಬ ತಾರತಮ್ಯ ಭಾವನೆಯನ್ನು ಹೊಂದದೇ ತಮಗಿಷ್ಟವಾದ ದೇವರ ಆರಾಧನೆ ಮಾಡಲು ಉಪದೇಶಿಸಿದ್ದಾರೆ. ಭಗವಂತನ ಕುರಿತಾಗಿ

ಮೇಲು-ಕೀಳುಗಳ ಭಾವನೆ ತಳೆಯುವವರನ್ನು ಹಾಗೂ ಇತರರಿಗೆ ಬೈದು ಮನ ನೋಯಿಸುವವರನ್ನು ಭಗವಂತನು ಸ್ವರ್ಗದ ಬದಲಾಗಿ ನರಕಕ್ಕೆ ತಳ್ಳುವನು ಎಂದು ದುಷ್ಟರಿಗೆ ಹೀಗೆ ಅರುಹಿದ್ದಾರೆ:

ಹರಿಯ ನಿಂದಿಸಿ ಹರ ಘನನೆಂದು ನರಕಕ್ಕೆ ಬೀಳಬಾರದು-ತಾ
ಪರರನು ಬೈದು ಪಾತಕತೆ ಮುನ್ನೊಳಗಾಗಬಾರದು[9]

ಕನಕದಾಸರು ನಿರೀಕ್ಷಿಸಿದ ಪ್ರಕಾರ ಸಮಾಜದಲ್ಲಿ ಹರಿ-ಹರ ಎಂಬ ದೈವತ್ವದ ವಿಷಯದಲ್ಲೂ ತಾರತಮ್ಯ ಹೊಂದುವುದರೊಂದಿಗೆ ಹರನ ಭಕ್ತರು ಹರನೇ ಶ್ರೇಷ್ಠನು ಹರಿ ಕನಿಷ್ಠನು ಎಂದು ಕಲಹ ಮಾಡುತ್ತಿದ್ದರೆಂಬುದನ್ನು ಕೀರ್ತನೆಗಳಲ್ಲಿ ಸ್ಪಷ್ಟಪಡಿಸುತ್ತಾರೆ. ಹರಿ-ಹರರ ಮಧ್ಯದ ಸಂಬಂಧವನ್ನು ಏಕ ಮನಸ್ಸಿನಿಂದ ಒಪ್ಪಿಕೊಂಡು ಆರಾಧಿಸುವ ಪರಿಯನ್ನು ಕನಕದಾಸರು ಅರುಹಿದ್ದಾರೆ. ಈ ಎಲ್ಲ ಅಂಶಗಳನ್ನು ನಾವು ಗಮನಿಸಿದರೆ ಹದಿನಾರನೆಯ ಶತಮಾನದಲ್ಲಿಯ ಸಾಮಾಜಿಕ ಸ್ಥಿತಿಗತಿಗಳು ಅಜ್ಞಾನಿಗಳ ಕೈವಶದಲ್ಲಿದ್ದು ಅನಾರೋಗ್ಯಕರವಾಗಿದ್ದವೆನ್ನಬಹುದು. ಇದಕ್ಕೆ ಪ್ರಮುಖ ಕಾರಣರು ಸಂಸ್ಕೃತ ಪಂಡಿತರು ಎಂಬುದನ್ನು ಅಲ್ಲಗಳೆಯುವಂತಿಲ್ಲ. ಅಂದರೆ ಅಕ್ಷರಸ್ಥರಾದ ಮೇಲ್ವರ್ಗದವರು ಹರನ ಭಕ್ತಿ ಆರಾಧನೆಗಳೊಂದಿಗೆ ಹರಿಯ ಭಕ್ತನಾದ ಕನಕದಾಸರನ್ನು ಕನಿಷ್ಠ ಮಟ್ಟಕ್ಕಿಳಿಸುವ ಉದ್ದೇಶದಿಂದ ಹರಿಯನ್ನು ನಿಂದಿಸುತಿದ್ದರೆನ್ನಬಹುದು. ಹರಿಯ ನಿಂದನೆ ಕನಕದಾಸರನ್ನು ಅಸಹನೆಗೊಳಿಸಿತ್ತು. ಹರಿನಿಂದನೆಯಿಂದ ನರಕವಾಸಿಗಳಾಗುವಿರಿ ಎಂದು ಕೀರ್ತನೆಗಳ ಮುಖಾಂತರ ಹರಿಯನ್ನು ನಿಂದಿಸುತ್ತಿದ್ದ ಜನರನ್ನು ಕುರಿತು ಹೇಳಿದ್ದಾರೆ. ಇದನ್ನು ಗಣನೆಗೆ ತೆಗೆದುಕೊಂಡರೆ ಹರಿ ಹರ ಎಂಬ ಪಕ್ಷಭೇದವು ಕನಕದಾಸರನ್ನು ಚಿಂತೆಗೀಡು ಮಾಡಿತ್ತೆನ್ನಬಹುದು.

'ಮುಂದೆ ಭಲಾ ಎಂದು ಹಿಂದೆ ನಿಂದಿಪರನ್ನು ಕೂಡಬಾರದು'[10] ಎಂದು ಹೇಳುವ ಕನಕದಾಸರ ಮಾತಿನಲ್ಲಿ ಗಾಢವಾದ ಅರ್ಥವಿದೆ. ಅಂದರೆ ಸಮಾಜದಲ್ಲಿಯ ಜನರು ಒಬ್ಬರು ಇನ್ನೊಬ್ಬರನ್ನು ಟೀಕಿಸುವ ಸ್ವಭಾವ ಹೊಂದಿದ್ದರು. ಮುಂದೆ ಬಣ್ಣಿಸಿ ಹಿಂದೆ ನಿಂದಿಸುವುದರೊಂದಿಗೆ ಆತನನ್ನು ನಾಲ್ಕು ಜನರ ಮಧ್ಯೆ ಅವಮಾನಗೊಳಿಸಲು ಪ್ರಯತ್ನಿಸಿದ್ದರು. ಇವೆಲ್ಲದರ ವಿರುದ್ಧ ಬಂಡಾಯದ ದನಿಮೊಳಗಿಸಿದ ಕನಕದಾಸರು ಸಮಾಜದ ಸರ್ವರನ್ನೂ ಒಂದುಗೂಡಿಸುವ ಪ್ರಯತ್ನಕ್ಕೆ ನಾಂದಿ ಹಾಡಿದರು.

ಕೋಪ ತಾಪ ಪರನಿಂದೆಗಳಂಥ ದುಷ್ಕೃತ್ಯಗಳಿಗೆ ಬಲಿಯಾಗದೇ ನಿನ್ನನ್ನು ನೀನು ಸಂತೈಸಿಕೊಂಡಿರಲು ಪ್ರಯತ್ನಿಸುವುದು ಒಳಿತು. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು ತನ್ನ ಹಿಡತದಲ್ಲಿಟ್ಟುಕೊಂಡು ಪಾಪರಹಿತ ಬದುಕಿಗೆ ಪ್ರಯತ್ನಿಸಬೇಕು. ಅಷ್ಟ ಮದಗಳ ದಾಸನಾಗಿ ಜೀವನದ ಸಂಕಷ್ಟಗಳಿಗೆ ಗುರಿಯಾಗದಿರು ಎಂಬುದನ್ನು ಜನರಿಗೆ ಅರುಹಿದ್ದಾರೆ. ಸಮಾಜದಲ್ಲಿ ದುಷ್ಟರ ಸಂಗದಿಂದ ದೂರ ಉಳಿದು ಶಿಷ್ಟ ಮಾನವನಾಗು. ಭ್ರಷ್ಟನಾಗಿ ಸಮಾಜದಲ್ಲಿ ಕಳಂಕಕ್ಕೆ ಸಿಲುಕುವ ಕಾರ್ಯಕ್ಕೆ ಕೈಹಾಕಬೇಡ

ಎಂದು ಬೋಧಿಸಿದ ಕನಕದಾಸರು ಅಷ್ಟಮದದಿ ಮೆರೆವ ಮೇಲ್ವರ್ಗದವರನ್ನು ಕುರಿತು ಹೀಗೆ ಹೇಳಿದ್ದಾರೆ:

ಅಷ್ಟ ಮದದಿ ಮೆರೆಯದಿರು ನಷ್ಟಕೆ ಗುರಿಯಾಗದಿರು
ದುಷ್ಟ ಸಂಗವನು ಮಾಡಿ ಭ್ರಷ್ಟನಾಗಬೇಡ ಮನವೆ"

ಕನಕದಾಸರು ಹೇಳುವ ಪ್ರಕಾರ ಅಂದಿನ ಸಮಾಜದಲ್ಲಿ ಬಲಿಷ್ಠರೆನಿಸಿಕೊಳ್ಳುವ ಉಳ್ಳವರು, ಹಣವಂತರು, ಪಂಡಿತರು, ಮಠಿಕರು ತಮ್ಮಷ್ಟಕ್ಕೆ ತಾವೇ ಶ್ರೇಷ್ಠರೆಂದು ಭಾವಿಸಿ ಕೆಳವರ್ಗದ ಜನರನ್ನು ಸಾಮಾಜಿಕವಾಗಿ ಶೋಷಿಸುತ್ತಿದ್ದರೆಂಬುದು ಗಮನಿಸಬೇಕಾದ ಅಂಶವಾಗಿದೆ. ಸಮಾಜದ ಬಹುಪಾಲು ಜನರು ದುಷ್ಟತನದಲ್ಲಿ ತಮ್ಮನ್ನು ತೊಡಗಿಸಿಕೊಂಡು ಜನರನ್ನು ಹಿಂಸಿಸುತ್ತಿದ್ದರು. ಇದನ್ನು ಮನಗಂಡು ಕನಕದಾಸರು ಅಂಥ ದುಷ್ಟರ ಸಹವಾಸದೊಂದಿಗೆ ಬೆರೆಯದಿರಲು ಸಲಹೆ ನೀಡಿದ್ದಾರೆ. ಅಂದರೆ ದುಷ್ಟತನದ ಅಟ್ಟಹಾಸವನ್ನು ಮೆಟ್ಟಿ ನಿಲ್ಲುವ ಕನಕದಾಸರು ಸಮಾಜದಲ್ಲಿ ಬಂಡಾಯದ ಧೋರಣೆ ತಳೆದಿದ್ದಾರೆ. ಭ್ರಷ್ಟಾಚಾರಿಗಳನ್ನು ತಮ್ಮ ಕೀರ್ತನೆಯ ನುಡಿಗಳ ಮುಖಾಂತರ ಮಟ್ಟ ಹಾಕುವ ಪ್ರಯತ್ನ ಕನಕದಾಸರ ಕೊಡುಗೆ.

ಕನಕದಾಸರು ತಮ್ಮ ಕೀರ್ತನೆಗಳ ಮುಖಾಂತರ ಉಪದೇಶ ಮಾಡುವುದರ ಜೊತೆಗೆ ಆಚರಣೆಯಲ್ಲೂ ನಡೆದು ತೋರಿಸಿ ಸಮಾಜದ ಜನರಿಗೆ ಮಾದರಿಯಾಗಿದ್ದಾರೆ. ಹೊಗಳಿಕೆ-ತೆಗಳಿಕೆಗಳಿಗೆ ಕಿವಿಗೊಡದ ಕನಕದಾಸರು ತಾವು ತಮ್ಮ ಸ್ವಭಾವದ ನೈಜತೆಯನ್ನು ಪ್ರದರ್ಶಿಸಿದ್ದಾರೆ. ಸಮಾಜದ ಮೇಲ್ವರ್ಗದವರ ಕಟು ನುಡಿಗಳನ್ನು ಗಣನೆಗೆ ತೆಗೆದುಕೊಳ್ಳದೆ ತಮಗೆ ಒಪ್ಪಿಗೆಯಾಗುವ ಒಳ್ಳೆಯ ಕೆಲಸಗಳನ್ನು ಕಾಯಾ-ವಾಚಾ-ಮನಸಾ ಮಾಡಿ ತೋರಿಸಿದ್ದಾರೆ. 'ಕನಕದಾಸರನ್ನು ಕೆಣಕದಿರಿ ಕೆಣಕಿ ತಿಣುಕದಿರಿ' ಎಂಬ ನುಡಿಯಂತೆ ಶೂದ್ರನಾದ ಕನಕದಾಸರನ್ನು ಮೇಲ್ವರ್ಗದ ಪಂಡಿತರು ಕೆಣಕಿದರೆಂದು ತಿಳಿಯಬಹುದು.

ಭೋಗಲಾಲಸೆಯಲ್ಲಿ ಮುಳುಗಿರುವ ಮನುಷ್ಯ ಪರರ ಸಂಕಷ್ಟಗಳನ್ನು ಪರಿಹರಿಸಲಾರನೆಂಬುದು ಸಕಲರಿಗೂ ತಿಳಿದ ಮಾತು. ನಾನು, ನನಗಾಗಿ, ನನ್ನಿಂದಲೇ ಎಂಬೆಲ್ಲ ಸ್ವಾರ್ಥದಲ್ಲಿ ತನ್ನನ್ನುದ್ಧರಸಿಕೊಂಡು ಬೇರೆಯವರನ್ನು ಕಡೆಗಣಿಸುವ ಸ್ವಭಾವ ಉಳ್ಳವರಲ್ಲಿ ಸಾಮಾನ್ಯವಾಗಿ ಇತ್ತು. ಅದು ತಪ್ಪು ಎಂಬುದು ಕನಕದಾಸರ ವಾದ. ಈ ಸಂಸಾರವೆಂಬುದು ಎರಡು ದಿನದ ಸಂತೆಯಿದ್ದಂತೆ. ಜ್ಞಾನದಿಂದ ತಿಳಿದು ನೋಡಿದರೆ ಈ ಸಂಸಾರವೆಂಬ ಸಂತೆಯಲ್ಲಿ ಏನೂ ಹುರುಳಿಲ್ಲ. ಬರಿಗೈಯಲ್ಲಿ ಹುಟ್ಟಿ ಬಂದ ನಾವು ಸತ್ತ ಮೇಲೂ ಏನನ್ನೂ ಜೊತೆಗೆ ಕೊಂಡೊಯ್ಯುವುದಿಲ್ಲ. ಮನುಷ್ಯ ಈ ಪ್ರಪಂಚದಲ್ಲಿ ಜೀವಿಸುವ ತನಕ ತನಗೆ ಏನೆಲ್ಲವನ್ನೂ ಗಳಿಸಿಕೊಳ್ಳುತ್ತಾ ಜೀವವಿರುವ ತನಕ ಭೋಗಿಸಿ ಸುಖಿಸುತ್ತಾನೆ. ಸತ್ತ ಮೇಲೆ ಗಳಿಸಿದ ಸಂಪತ್ತೆಲ್ಲವನ್ನೂ ಇಲ್ಲಿಯೇ ಬಿಟ್ಟು ಹೋಗುತ್ತಾನೆ. ಸಮಾಜಮುಖಿಯಾಗಿ ಚಿಂತನೆಗೈಯದೇ, ಹಸಿದವರು, ಬಡವರು, ದುರ್ಬಲರು, ರೋಗಿಗಳು, ವೃದ್ಧರನ್ನು ಉದ್ಧರಿಸುವ ನಿಟ್ಟಿನತ್ತ ವಿಚಾರ ಮಾಡದೆ ಪರಹಿತ ಕಾರ್ಯಗಳನ್ನು

ಮಾಡದವನಾಗುತ್ತಾನೆ. ಸಮಾಜದಲ್ಲಿ ನಾನೆಷ್ಟು ಸುಖವಾಗಿದ್ದೇನೆಂಬುದಕ್ಕಿಂತ ಸಮಾಜದಲ್ಲಿಯ ಜನರ ಸುಖಕ್ಕಾಗಿ ನಾನೇನು ತ್ಯಾಗ ಮಾಡಬೇಕೆಂದು ಯೋಚಿಸದೇ ತನ್ನ ಸಿರಿವಂತಿಕೆಯ ಸೊಕ್ಕಿನಿಂದ ಮೆರೆಯುವುದು ತರವಲ್ಲವೆಂಬುದು ಕನಕದಾಸರ ವಾದ. ಆದರೆ ಸಾಮಾಜಿಕವಾಗಿ ಯಾವುದೇ ಪುಣ್ಯ ಕಾರ್ಯಗಳನ್ನು ಕೈಗೊಳ್ಳದವರು ಕನಕದಾಸರ ಕಾಲದಲ್ಲಿದ್ದರೆಂಬುದು ಸ್ಪಷ್ಟ.

ಏನು ಇಲ್ಲದ ಎರಡು ದಿನದ ಸಂಸಾರ
ಜ್ಞಾನದಲಿ ದಾನ ಧರ್ಮವ ಮಾಡಿರಯ್ಯ

ಹಸನಾದ ಭೂಮಿಯನು ಧಾರೆ ಎರೆಯಲು ಬೇಕು
ಪುಸಿಯಾಡದೆಲೆ ಭಾಷೆ ನಡೆಸಲೇಬೇಕು[12]

ಮೇಲಿನ ಎರೆಡೂ ಕೀರ್ತನೆಯ ಭಾಗಗಳಲ್ಲಿರುವ ಮಾತಿನ ಅರ್ಥವನ್ನು ವಿಸ್ತರಿಸುವುದಾದರೆ, ಕನಕದಾಸರು ಇದ್ದವರು ಇಲ್ಲದವರತ್ತ ಗಮನ ಹರಿಸದಿರುವ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ಅಂದರೆ 'ನಶ್ವರವೀ ದೇಹ ಶಾಶ್ವತವಲ್ಲ' ಎಂಬ ಮಾತಿನಂತೆ ಈ ಭೂಮಿಯ ಮೇಲೆ ಶಾಶ್ವತವಾಗಿ ನಿಲ್ಲದ ಈ ದೇಹ ಎಂದು ಬಿದ್ದು ಹೋಗುವುದೋ ತಿಳಿಯದು. ದೇಹ ಬಿದ್ದು ಹೋಗುವುದರೊಳಗೇ ದಾನಧರ್ಮವ ಮಾಡಿ ಮುಕ್ತಿ ಮಾರ್ಗದತ್ತ ನಡೆಯಲು ಪ್ರಯತ್ನಿಸು. ಸ್ವರ್ಗ ಲಭಿಸುವುದು ಪುಣ್ಯವಂತರಿಗೆ ಮಾತ್ರ. ಪುಣ್ಯ ಲಭಿಸಬೇಕಾದರೆ ಇಲ್ಲದವರಿಗೆ ಇದ್ದವರು ದಾನಧರ್ಮ ಮಾಡಬೇಕು. ಫಲವತ್ತಾದ ನಿಮ್ಮ ಭೂಮಿಯಲ್ಲಿ ಸ್ವಲ್ಪವನ್ನು ಭೂ ರಹಿತರಿಗೆ ದಾನ ಮಾಡಿರಿ. ದಾನ ಮಾಡುವೆನೆಂದು ನೀಡಿದ ಭಾಷೆಯನ್ನು ತಪ್ಪದೇ ಪಾಲಿಸಿರಿ ಎಂದು ಬೋಧಿಸಿದ್ದಾರೆ.

ಕಳ್ಳತನ ಮಾಡುವುದಾಗಲಿ ಸುಳ್ಳು ಹೇಳುವುದಾಗಲಿ ಮನುಷ್ಯನ ಚಾರಿತ್ರ್ಯಕ್ಕೆ ಧಕ್ಕೆ ತರುವಂಥ ಕುಕೃತ್ಯಗಳಾಗಿವೆ. ಇಂಥ ಕುಕೃತ್ಯಗಳೊಂದಿಗೆ ಗಳಿಸಿದ ಆಸ್ತಿ, ಸಂಪತ್ತು, ಧನ-ಕನಕಗಳು ಪ್ರಾಯಶ್ಚಿತಕ್ಕೆ ಕಾರಣವಾಗುತ್ತವೆ. ಅಂಥ ಗಳಿಕೆಯಿಂದ ಮನುಷ್ಯನು ಸಮಾಜದ ಅಪವಾದಕ್ಕೆ ಗುರಿಯಾಗುತ್ತಾನೆ. ಅಂಥ ಹೀನ ಕೃತ್ಯಗಳಿಂದ ಮನುಷ್ಯ ದೂರವಿರಬೇಕೆಂದು ಕನಕದಾಸರು ಸಾರಿದ್ದಾರೆ. ಯಾವುದೇ ಸಂದರ್ಭದಲ್ಲೂ ಪರಸ್ಪರರು ಮಾನ-ಪ್ರಾಣಗಳನ್ನು ಕಾಯ್ದುಕೊಳ್ಳುವ ವಿಚಾರ ಮಾಡಬೇಕು. ಯಾರ ಮಾನವನ್ನೂ ಕಳೆಯುವ ಅಧಿಕಾರ ಯಾರಿಗೂ ಇರುವುದಿಲ್ಲ. ನೆರೆದ ಜನಸಮೂಹದಲ್ಲಿ ಯಾರನ್ನೂ ನಿಂದನಾತ್ಮಕವಾಗಿ ಮಾತಾಡಿ ಮನ ನೋಯಿಸುವುದು ಅಪರಾಧ. ಬೇರೊಬ್ಬರ ಮಾನ ಉಳಿಸಿ ಸಮಾಜದ ಗೌರವಕ್ಕೆ ಪಾತ್ರರಾಗಿರೆಂದು ಕನಕದಾಸರು ಉಪದೇಶಿಸಿದ್ದಾರೆ. ಸಮಾಜದಲ್ಲಿ ನನಗೆ ಸಮನಾರಿಲ್ಲ ಎನ್ನುವುದಕ್ಕಿಂತ ನಾವೆಲ್ಲರೂ ಒಂದೇ ತಾಯಿಯ ಮಕ್ಕಳೆಂದು ಭಾವಿಸಿ ನಡೆದರೆ ಎಲ್ಲರೂ ಆದರ್ಶಪ್ರಾಯರಾಗುತ್ತಾರೆ. ಆ ಕುರಿತು ಮನುಷ್ಯ ವಿಚಾರ ಮಾಡಬೇಕೆಂದಿದ್ದಾರೆ. ಈ ಬದುಕು ಸ್ಥಿರವಾದುದಲ್ಲ ಎರಡು ದಿನದ ಸಂಸಾರದ ಸಂತೆಯಲ್ಲಿ ನಾವೆಷ್ಟು ಗೌರವದಿಂದ ಬಾಳಿದೆವೆನ್ನುದಕ್ಕಿಂತ ಬೇರೆಯವರನ್ನೆಷ್ಟು

ಗೌರವಿಸಿದೆವೆಂಬುದನ್ನು ವಿಚಾರಿಸಿರೆಂದು ಸಲಹೆ ನೀಡುತ್ತಾರೆ. ಇದರಿಂದ ಕನಕದಾಸರಲ್ಲಿಯ ಸಾಮಾಜಿಕ ಕಾಳಜಿ ಎಷ್ಟೆಂದು ಗೊತ್ತಾಗುತ್ತದೆ.

ಸಂಪತ್ತು ಇಂದು ಇದ್ದು ನಾಳೆ ಇಲ್ಲದೆಯೂ ಆಗಬಹುದು. ಮನುಷ್ಯರಾಗಿ ಹುಟ್ಟಿ ಬಂದವರೆಲ್ಲರೂ ಜೊತೆಗೆ ಸಂಪತ್ತನ್ನು ತಂದವರಲ್ಲ. ಅದು ಈ ಭೂಮಿಯ ಮೇಲೆ ಪಡೆದ ಭಗವಂತನ ಕಾಣಿಕೆ. ಅನಾಯಾಸವಾಗಿ ಭಗವಂತನಿಂದ ಪಡೆದುಕೊಂಡ ಸಂಪತ್ತು ಭಗವಂತನ ಮಾರ್ಗದಲ್ಲಿ ಧಾರೆ ಎರೆಯುವ ಪ್ರಯತ್ನ ನಮ್ಮದಾಗಬೇಕು. ಇದ್ದ ಕಾಲದಲ್ಲಿ ಇಲ್ಲದವರನ್ನು ಕರೆದು ದಾನ ಧರ್ಮಾದಿಗಳನ್ನು ಮಾಡಿ ಪುಣ್ಯ ಕಟ್ಟಿಕೊಳ್ಳಬೇಕೆಂದು ಕನಕದಾಸರು ಹೇಳಿದ್ದಾರೆ. ಭಗವಂತನಿಂದ ಸಂಪತ್ತನ್ನು ಪಡೆದಾಕ್ಷಣ ಯಾರೂ ಶ್ರೀಮಂತರಾಗುವುದಿಲ್ಲ. ಭಗವಂತನ ಮುಂದೆ ಎಲ್ಲರೂ ಒಂದೇ. ಆತನಿಗೆ ಎಲ್ಲರೂ ಋಣಿಯಾಗಿದ್ದಾರೆ. ಆದ್ದರಿಂದ ಆಸ್ತಿ ಇರಲಿ, ಅಧಿಕಾರವಿರಲಿ, ದೊರೆತನವಿರಲಿ ಮನುಷ್ಯನಾದವನು ಅಹಂಕಾರದಿಂದ ಮೆರೆಯುವುದು ತರವಲ್ಲ. ಇಂಥ ಸಿರಿವಂತರನ್ನು ಪುಣ್ಯದ ಮಾರ್ಗ ತೋರಿಸಲು ನೀತಿಬೋಧಕ ಕೀರ್ತನೆಗಳ ಈ ಸಾಲುಗಳು ಮಾದರಿಯಾಗಿವೆ.

ದೊರೆತನವು ಬಂದಾಗ ಕೆಟ್ಟುದ ನುಡಿಯಬೇಡ
ಸಿರಿಬಂದ ಕಾಲಕ್ಕೆ ಬಲು ಮೆರೆಯಬೇಡ[13]

ಎನ್ನುವ ಮೇಲಿನ ಮಾತಿನಲ್ಲಿ ಕನಕದಾಸರು ಮನುಷ್ಯನನ್ನು ಸಿರಿತನದ ಮದಾಂಧತೆಯಿಂದ ಮುಕ್ತಗೊಳಿಸಿ ಉದಾರಿಯನ್ನಾಗಿ ಪರಿವರ್ತಿಸುವ ಸಾಮಾಜಿಕ ಪ್ರಜ್ಞೆ ಮೆರೆಸಿದ್ದಾರೆ.

ಸಂತ ಕನಕದಾಸರು ತಮ್ಮ ಸ್ವಾರ್ಥಕ್ಕಿಂತ ಪರಹಿತಾರ್ಥಕ್ಕಾಗಿ ಹೆಚ್ಚು ಒತ್ತು ಕೊಟ್ಟವರು ಸರ್ವರನ್ನೂ ಪರೋಪಕಾರದೆಡೆಗೆ ಕೊಂಡೊಯ್ಯಲು ಪ್ರಯತ್ನ ಮಾಡಿದವರಾಗಿದ್ದಾರೆ. ಪರೋಪಕಾರ ಮತ್ತು ಪರಹಿತ ಚಿಂತನೆಗಳಲ್ಲಿಯೂ ಭಗವಂತನನ್ನು ಕಾಣುವ ಭರವಸೆಯನ್ನು ಜನರಲ್ಲಿ ಮೂಡಿಸಿದ್ದಾರೆ. ಸ್ವಾರ್ಥವು ದುರಭಿಮಾನಕ್ಕೆ ಕಾರಣವಾಗುತ್ತದೆ. ನಿಸ್ವಾರ್ಥವು ಸದಭಿಮಾನದೊಂದಿಗೆ ಸಜ್ಜನರತ್ತ ಕೊಂಡೊಯ್ಯುತ್ತದೆ. ಸಜ್ಜನರೊಡನೆ ವ್ಯವಹರಿಸುವುದರಿಂದ ಜೀವನದಲ್ಲಿ ಸದಾಚಾರಿಗಳಾಗಿ, ಗೌರವಾನ್ವಿತರಾಗಿ ಬಾಳಲು ಸಾಧ್ಯವಾದೀತು. 'ಸಜ್ಜನರ ಸಂಗದೊಳಗಿರಿಸೆನ್ನ ರಂಗ'[14] ಎಂದು ತಮ್ಮ ಕೀರ್ತನೆಯಲ್ಲಿ ತಮ್ಮನ್ನೂ ಸಜ್ಜನರೊಳಗಿರಿಸುವಂತೆ ತಮ್ಮ ಆರಾಧ್ಯ ದೈವವನ್ನು ಬೇಡಿಕೊಂಡಿದ್ದಾರೆ.

ಗುರುಸತಿಗೆ ಪರಸತಿಗೆ ಎರಡು ಬಗೆವರ ಸಂಗ
ಗುರುನಿಂದೆ ಪರನಿಂದೆ ಮಾಡುವರ ಸಂಗ
ಪರಹಿತಾರ್ಥದ ಧರ್ಮವರಿಯದವರ ಸಂಗ
ಮರುಳ ಪಾಮರ ಸಂಗ ಬಲು ಭಂಗ ಎಲೋರಂಗ[15]

ಸಜ್ಜನರೊಂದಿಗೆ ಸಹವಾಸ ಮಾಡಿ ವ್ಯವಹರಿಸುವುದರಿಂದ ಸಿಗುವ ಸುಖಾನಂದ ನಿಜಕ್ಕೂ ಹೆಜ್ಜೇನಿನ ಸೇವನೆಯಂತೆ ಮಧುರವಾಗಿರುತ್ತದೆ. ದುರುಳರ ಸಹವಾಸ ಮಾಡಿದರೆ ಸಜ್ಜನರೂ ದುರ್ಜನರಾಗಿ ಮಾರ್ಪಡುವರು. ಗುರುಸತಿ ಪರಸತಿಗೆ ಎರಡು ಬಗೆದು ಗುರು ಹಾಗೂ ಪರನಿಂದೆಯೊಂದಿಗೆ ಪರಹಿತ ಬಯಸದವರು ಮೂರ್ಖರು. ಸಜ್ಜನರ ಸಂಗದೊಳಗಿರಿಸಿ ನನ್ನನ್ನೂ ಸಜ್ಜನನ್ನಾಗಿಸು ಎಂದು ದೇವರಲ್ಲಿ ಮೊರೆ ಹೋಗಿದ್ದನ್ನು ಕಂಡರೆ, ಕನಕದಾಸರಲ್ಲಿ ಸಜ್ಜನರ ಮೇಲಿದ್ದ ಗೌರವ ಎಷ್ಟೊಂದು ಆಳವಾಗಿತ್ತೆಂಬುದಕ್ಕೆ ಅವರ ಮೇಲಿನ ಮಾತುಗಳೇ ಸಾಕ್ಷಿ. ಅಂದರೆ ಸಮಾಜದ ಸಜ್ಜನರನ್ನು ಎಂದಿಗೂ ಅಗೌರವದಿಂದ ಕಾಣದೇ ಭಯ-ಭಕ್ತಿ, ಆದರಗಳಿಂದ ಕಾಣಬೇಕೆಂದು ಜನರಿಗೆ ತಿಳಿಸಿ ತಮ್ಮ ಸಾಮಾಜಿಕ ಪ್ರಜ್ಞೆ ಮೆರೆದಿದ್ದಾರೆ.

ಕನಕದಾಸರ ಕೀರ್ತನೆಗಳಲ್ಲಿ ನಮಗೆ ಪ್ರಮುಖವಾಗಿ ಕಂಡು ಬರುವುದು ಸಮಾಜ ಸುಧಾರಣೆ ಹಾಗೂ ದಲಿತೋದ್ಧಾರ. ಮನುಷ್ಯ ಹುಟ್ಟಿದಾಗ ಆತನಿಗೆ ಜಗತ್ತಿನ ಯಾವುದೇ ಅರಿವಿರುವುದಿಲ್ಲ. ಮಿಗಿಲಾಗಿ ಒಳಿತು ಕೆಡುಕುಗಳ ಬಗ್ಗೆ ಅರಿವಿರುವುದಿಲ್ಲ. ಬಾಲ್ಯದ ಸಮಯದಲ್ಲಿ ಪೋಷಕರಿಂದ ಉತ್ತಮ ಸಂಸ್ಕಾರದ ಅಗತ್ಯವಿರುತ್ತದೆ. ಸಂಸ್ಕಾರಕ್ಕೊಳಗಾದ ಮಗು ಸಮಾಜದಲ್ಲಿ ಒಳ್ಳೆಯ ವ್ಯಕ್ತಿಯಾಗಿ ಬೆಳೆಯುತ್ತದೆ. ಮುಂದಿನ ದಿನಗಳಲ್ಲಿ ಇಡೀ ಸಮಾಜವನ್ನೇ ಒಳಿತಿನೆಡೆಗೆ ಕೊಂಡೊಯ್ದು ಒಳ್ಳೆಯ ವ್ಯಕ್ತಿ ಎಂಬ ಶ್ಲಾಘನೆಗೆ ಪಾತ್ರನಾಗುತ್ತಾನೆ. ಒಳ್ಳೆಯ ವ್ಯಕ್ತಿ ಯಾವ ಊರಿನಲ್ಲಿರುತ್ತಾನೋ ಆ ಗ್ರಾಮದ ಪರಿಸರವೇ ಒಳ್ಳೆಯದಾಗಿ ಪರಿಣಮಿಸುತ್ತದೆ. ಇಲ್ಲದಿದ್ದರೆ ಕೆಟ್ಟ ವ್ಯಕ್ತಿಗಳಿಂದ, ಕೂಡಿದ ಊರಿನ ಅವಸ್ಥೆಯೇ ಹದಗೆಟ್ಟು ಹೋಗುತ್ತದೆ. ಕನಕದಾಸರು ತಮ್ಮ ವಿಶೇಷ ಚಿಂತನೆಯೊಂದಿಗೆ ಅಂದಿನ ಹದಗೆಟ್ಟ ಸಮಾಜದ ಜನರನ್ನು ಕುರಿತು ಹೇಳಿದ್ದಾರೆ. ಅಂದರೆ ಅಂದಿನ ಸುಶಿಕ್ಷಿತರೆಂದೆನಿಸಿಕೊಂಡಿದ್ದ ಕೆಲ ಮೇಲ್ವರ್ಗದವರು ನಾವೇ ಶ್ರೇಷ್ಠರು ಉಳಿದವರು ಕನಿಷ್ಠರೆಂದು ಭಾವಿಸಿ ತಾರತಮ್ಯದೊಂದಿಗೆ ಜನರನ್ನು ಶೋಷಿಸುತ್ತಿದ್ದರು. ಅಂಥವರನ್ನೆಚ್ಚರಿಸಿ ಒಳ್ಳೆಯತನವೆಂದರೇನು, ಒಳ್ಳೆಯವರು ಹೇಗಿರಬೇಕು ಎಂಬ ಪಾಠವನ್ನು ಸ್ವಾರ್ಥ ಜನರಿಗೆ ಕಲಿಸಲು ಬಂಡಾಯದ ಮುಖಾಂತರ ಪ್ರಯತ್ನಿಸಿದರು. ಸ್ವಾರ್ಥ ಬಿಟ್ಟು ಒಳ್ಳೆಯ ಮಾರ್ಗ ಹಿಡಿದು ಇತರರಿಗೆ ಮಾದರಿಯಾಗಬೇಕೆಂದಿದ್ದಾರೆ ಕನಕದಾಸರು. ಕನಕದಾಸರಾಗಲಿ, ಸರ್ವಜ್ಞನಾಗಲಿ ಅವರವರ ಕಾಲಾವಧಿಯಲ್ಲಿ ಜನರ ಕೆಟ್ಟತನವನ್ನು ಖಂಡಿಸಿ ಅದನ್ನು ಒಳ್ಳೆಯತನಕ್ಕೆ ಬದಲಾಯಿಸುವ ಚಿಂತನೆ ಮಾಡಿದ್ದಾರೆ.

ಕನಕದಾಸರು ಮನುಷ್ಯರಲ್ಲಿ ಒಳ್ಳೆಯತನವಿದ್ದರೆ ಸಾಲದು. ಸಮಾಜದ ಜನರನ್ನೂ ಒಳ್ಳೆಯವರನ್ನಾಗಿ ಪರಿವರ್ತಿಸಬೇಕು. ಉಳ್ಳವರು ಇಲ್ಲದವರಿಗೆ ಧನ ದ್ರವ್ಯಗಳನ್ನು ನೀಡಿ ಅವರ ಹಸಿವು ನಿವಾರಣೆಗೆ ಕಾರಣರಾಗಬೇಕು. ಧನ-ದ್ರವ್ಯಗಳು ರಾಶಿ-ರಾಶಿಯಾಗಿದ್ದರೂ ಅವು ಇಲ್ಲದವರ ಹಸಿವು ಹಿಂಗಿಸಲು ನಿಷ್ಪ್ರಯೋಜಕ ಎಂಬಂತಾಗಿದೆ. ದಾನ ಮಾಡದೆ ಇದ್ದರೆ ಆ ಸಂಪತ್ತೆಲ್ಲವೂ ನಿರುಪಯುಕ್ತವಾದುದು ಎಂದು ಜಿಪುಣರನ್ನುದ್ದೇಶಿಸಿ ಹೀಗೆ ಹೇಳಿದ್ದಾರೆ.

ದಾರಿದ್ರ್ಯಕ್ಕೊದಗದ ದ್ರವ್ಯ ಪದಾರ್ಥದ
ಏರಿ ಇದ್ದರೇನು ಪರ್ವತವಿದ್ದರೇನು
ಮಾಡು ದಾನ-ಧರ್ಮ ಪರ ಉಪಕಾರವ ಮರೆಯದಿರೆಚ್ಚರಿಕೆ[16]

ಎಂದು ನುಡಿದು ಅಂದಿನ ಕಾಲದಲ್ಲಿನ ಜಮೀನುದಾರರು, ಶ್ರೀಮಂತ ವರ್ಗದವರು ರಾಶಿಗಟ್ಟಲೆ ದ್ರವ್ಯವನ್ನು ಹೊಂದಿದ್ದರೂ ಅದನ್ನು ಬೇರೆಯವರಿಗೆ ದಾನ ಮಾಡದವರಾಗಿದ್ದರು. ಕನಕದಾಸರ ವಿಚಾರದಂತೆ ಸಮಾಜದ ಯಾವುದೇ ಶ್ರೀಮಂತನಾಗಲಿ ತನ್ನಲ್ಲಿರುವ ಧನ-ದ್ರವ್ಯವೆಲ್ಲವನ್ನು ಹಂಚಿ ತಿನ್ನಲು ಪ್ರಯತ್ನಿಸಬೇಕು. ಧನ ದ್ರವ್ಯಗಳೆಲ್ಲವೂ ಭಗವಂತನಿಂದ ಪ್ರಾಪ್ತವಾದ ಭಾಗ್ಯವಾಗಿದ್ದು ಅದನ್ನು ಇತರರಿಗೆ ವಿತರಿಸಿದಷ್ಟೂ ಪುಣ್ಯ ಲಭಿಸಿ ಸಂಪತ್ತಿನಲ್ಲಿ ವೃದ್ಧಿ ಕಾಣಿಸಿಕೊಳ್ಳುತ್ತದೆ. ಇದು ನಿಮ್ಮನ್ನು ಸ್ವರ್ಗದೆಡೆಗೆ ಕರೆದೊಯ್ಯುತ್ತದೆ. ನಾನು-ನನ್ನದು, ನನಗೇ ಇರಬೇಕೆಂದು ವಿಚಾರಿಸುವುದರಿಂದ ಭಗವಂತನ ಸಾಕ್ಷಾತ್ಕಾರದಿಂದ ದೂರ ಉಳಿಯುವಿರಿ. ಇದ್ದಾಗ ದಾನ-ಧರ್ಮಾದಿಗಳನ್ನು ಮಾಡಿ ಪುನೀತರಾಗಿರೆಂದು ಸಕಲರಿಗೂ ಕಿವಿ ಮಾತು ಹೇಳಿ ಕನಕದಾಸರು 'ಭೋಗಿಸದೆ ಇಹ ಪರಕ್ಕೆ ಗಳಿಸಿದರ್ಥ ಅಪಾರ್ಥ' ಎಂದಿದ್ದಾರೆ. ಕನಕದಾಸರು ತಮ್ಮ ಜೀವನದಲ್ಲಿ ಕಂಡ ಬಡವರ ಹಸಿವನ್ನು ಇಂಗಿಸಲು ಚಿಂತಿಸಿರುವುದು ವಿಶೇಷವಾಗಿದೆ.

**ಕೊನೆ ಟಿಪ್ಪಣಿಗಳು :**

1, ಕನಕ ಸಾಹಿತ್ಯ ದರ್ಶನ-4 ಕೀರ್ತನೆ 169, ಪುಟ 333, ಪ್ರೊ. ಸುಧಾಕರ.
2, 3. ಕನಕ ಸಾಹಿತ್ಯ ದರ್ಶನ-4 ಕೀರ್ತನೆ 169, ಪುಟ 333, ಪ್ರೊ. ಸುಧಾಕರ.
4. ಕನಕ ಸಾಹಿತ್ಯ ದರ್ಶನ-4 ಕೀರ್ತನೆ 170, ಪುಟ 334, ಪ್ರೊ. ಸುಧಾಕರ.
5, 6. ಕನ್ನಡ ಸಾಹಿತ್ಯ ದರ್ಶನ ಸಂಪುಟ 4, ಕೀರ್ತನೆ 170, ಪುಟ 334. ಪ್ರೊ. ಸುಧಾಕರ.
7. ಕನಕ ಸಾಹಿತ್ಯ ದರ್ಶನ-4 ಕೀರ್ತನೆ, 171, ಪುಟ 335, ಪ್ರೊ. ಸುಧಾಕರ.
8, 9 ಕನಕ ಸಾಹಿತ್ಯ ದರ್ಶನ 4, ಕೀರ್ತನೆ 171, ಪುಟ 335, ಪ್ರೊ. ಸುಧಾಕರ.
10. ಕನಕ ಸಾಹಿತ್ಯ ದರ್ಶನ-4 ಕೀರ್ತನೆ 171, ಪುಟ 335, ಪ್ರೊ. ಸುಧಾಕರ.
11. ಕನಕ ಸಾಹಿತ್ಯ ದರ್ಶನ-4 ಕೀರ್ತನೆ 174, ಪುಟ 338, ಪ್ರೊ. ಸುಧಾಕರ.
12. ಕನಕ ಸಾಹಿತ್ಯ ಸಂಪುಟ 4, ಕೀರ್ತನೆ 175, ಪುಟ 339, ಪ್ರೊ. ಸುಧಾಕರ.
13. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 175, ಪುಟ 339, ಪ್ರೊ. ಸುಧಾಕರ.
14, 15. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 179, ಪುಟ 344, ಪ್ರೊ. ಸುಧಾಕರ.
16. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 182, ಪುಟ 349, ಪ್ರೊ. ಸುಧಾಕರ.

***

# ಅಧ್ಯಾಯ 3

## ಕನಕದಾಸರ ಸಾಹಿತ್ಯದಲ್ಲಿ ಜಾತಿ ವ್ಯವಸ್ಥೆಯ ಪರಿಶೀಲನೆ

ಹದಿನಾರನೆಯ ಶತಮಾನದಲ್ಲಿಯ ಜಾತಿ ವ್ಯವಸ್ಥೆಯು ಕೆಳವರ್ಗದವರನ್ನು ದಯನೀಯ ಸ್ಥಿತಿಗೆ ತಳ್ಳಿತ್ತು. ಸವರ್ಣಿಯರು ಜಾತೀಯತೆಯ ಭಾವನೆಯೊಂದಿಗೆ ತಮ್ಮನ್ನು ಉಚ್ಚ ಕುಲದವರೆಂದೂ ಉಳಿದವರೆಲ್ಲರೂ ನೀಚ ಕುಲದವರೆಂದು ಭಾವಿಸಿದ್ದರು. ಚಾತುರ್ವರ್ಣಗಳ ನಂತರದ ಪಂಚವರ್ಣಿಯರನ್ನು ಅಸ್ಪೃಶ್ಯರೆಂದು ಸಮಾಜದಿಂದಲೇ ಬಹಿಷ್ಕರಿಸಿಬಿಟ್ಟಿದ್ದರು. ಪುರೋಹಿತಶಾಹಿಗಳು ತಮ್ಮ ಧರ್ಮವನ್ನು ಉನ್ನತೀಕರಿಸಿಕೊಂಡು ಇತರ ಎಲ್ಲ ಧರ್ಮಗಳನ್ನು ಕೆಳಮಟ್ಟದಲ್ಲಿ ಕಂಡು ಅಸ್ಪೃಶ್ಯರೆಂದು ಘೋಷಿಸಿದ್ದರು. ಇದರಿಂದ ಅಲ್ಪಸಂಖ್ಯಾತ ಕೆಳವರ್ಗದವರ ಸ್ಥಿತಿ ಅತ್ಯಂತ ಚಿಂತಾಜನಕವಾಗಿತ್ತೆಂಬುದು ಕನಕದಾಸರ ಕೀರ್ತನೆಗಳಿಂದ ಅರಿಯಬಹುದಾಗಿದೆ. ಸಾಮಾಜಿಕ ಸ್ಥಾನಮಾನಗಳಿಂದ ವಂಚಿತರಾಗಿದ್ದ ಅವರ ಕೂಗನ್ನು ಯಾರೂ ಕೇಳದವರಾಗಿದ್ದರಿಂದ ಅವರ ಬದುಕೇ ಕತ್ತಲಲ್ಲಿ ಲೀನವಾಗಿತ್ತೆಂಬುದು ಸಾಬೀತಾಗುತ್ತದೆ. ಪಂಡಿತೋತ್ತಮರು ಸಾಮಾನ್ಯವರ್ಗದವರ ಮೇಲೆ ಹಿಡಿತ ಸಾಧಿಸಿ ವಿನಾಕಾರಣ ಶೋಷಣೆಗೊಳಪಡಿಸುತ್ತಿದ್ದುದರಿಂದ ಅವರು ತಮ್ಮ ಸ್ವಾತಂತ್ರ್ಯವನ್ನೇ ಅರಿಯದವರಾಗಿದ್ದರು. ಸುಸಂಸ್ಕೃತ ವರ್ಗದವರು ಅವರುಗಳನ್ನು ತುಚ್ಛವಾಗಿ ಕಂಡು, ಅನಾಗರಿಕರೆಂದು ಗೇಲಿಮಾಡಿ ಶಿಕ್ಷಣದಿಂದ ದೂರವಿಟ್ಟಿದ್ದರು.

ಸಮಾಜದಿಂದಲೇ ಬಹಿಷ್ಕರಿಸಲ್ಪಟ್ಟ ಕೆಳವರ್ಗದವರು ಉನ್ನತ ವರ್ಗದವರ ಕಿರುಕುಳದಿಂದ ಮಾನಸಿಕ ಹಿಂಸೆಗೊಳಗಾಗಿದ್ದರು. ಮೇಲ್ವರ್ಗದವರ ಅಡಿಯಾಳಾಗಿ ಗುಲಾಮರಂತೆ ದುಡಿಯುವುದು ಅನಿವಾರ್ಯವಾಗಿತ್ತು. ತಮ್ಮ ಸಾಮಾಜಿಕ ಹಕ್ಕಿನ ಹೋರಾಟಕ್ಕೆ ಬ್ರಾಹ್ಮಣರ ದೌರ್ಜನ್ಯದಿಂದ ರೆಕ್ಕೆ ಕಿತ್ತ ಪಕ್ಷಿಯಂತೆ ಸ್ವತಂತ್ರವಾಗಿ ಜೀವಿಸುವಲ್ಲಿ ಸಫಲರಾಗಲಿಲ್ಲ. ಒಟ್ಟಿನಲ್ಲಿ ಬ್ರಾಹ್ಮಣರ ದೃಷ್ಟಿಯು ಕೆಳವರ್ಗವನ್ನು ಕೀಳ್ಮಟ್ಟದ್ದೆಂದು ಭಾವಿಸಿದ್ದು ದುರ್‍ದೃಷ್ಟಕರ ಸಂಗತಿ. ಕನಕದಾಸರು ಅಂಥವರ ಮೇಲಿನ ದೌರ್ಜನ್ಯವನ್ನು ಹತ್ತಿರದಿಂದ ದುರದೃಷ್ಟಕರ ಕಂಡು ಚಿಂತಿಸಿದರು. ಅವರನ್ನು ಅನಿಷ್ಟರಿಂದ ಮುಕ್ತಗೊಳಿಸಿ ಸ್ವತಂತ್ರ ಬದುಕು ನಡೆಸಲು

ಅನುವು ಮಾಡಿಕೊಡಲು ಚಿಂತಿಸಿದರು. ಬ್ರಾಹ್ಮಣರ ಹಿಂಸಾತ್ಮಕ ಕೃತ್ಯಗಳನ್ನು ಖಂಡಿಸಿ ಅವರ ವಿರುದ್ಧ ಬಂಡಾಯದ ದನಿ ಎತ್ತಿ ಕ್ರಾಂತಿ ಕೈಗೊಂಡರು. ಕನಕದಾಸರು, ಮೇಲ್ವರ್ಗದ ಜನರ ಮನಸ್ಸಿನಲ್ಲಿ ಹೆಮ್ಮರವಾಗಿ ಬೆಳೆದಿದ್ದ ಜಾತೀಯತೆಯ ತಾರತಮ್ಯವನ್ನು ಬುಡಸಹಿತ ಕಿತ್ತೆಸೆಯಲು ಪ್ರಯತ್ನಿಸಿದ್ದು ಇಲ್ಲಿ ವಿಶೇಷವಾಗಿದೆ.

ಭಕ್ತಿಪಂಥದ ಅಗ್ರಮಾನ್ಯ ಕೀರ್ತನಕಾರರಾಗಿದ್ದ ಕನಕದಾಸರು ಹರಿದಾಸರಾಗಿ ಭಗವಂತನ ದರ್ಶನಾತುರದಲ್ಲಿ ಅವಿರತವೂ ಧ್ಯಾನಾಸಕ್ತರಾಗಿದ್ದರು. ಮೇಲ್ಜಾತಿಯವರ ಪಾಂಡಿತ್ಯವನ್ನೂ ಮೀರಿದ ಜ್ಞಾನವನ್ನು ಹೊಂದಿದವರಾಗಿದ್ದರು. ಭಕ್ತಿ ಆರಾಧನೆಗಳ ಪ್ರಶ್ನೆಗಳು ಉದ್ಭವಿಸಿದಾಗ ಸೂಕ್ತವಾಗಿ ಉತ್ತರಿಸುವ ಸಾಮರ್ಥ್ಯ ಹೊಂದಿದ್ದರೆಂಬುದರಲ್ಲಿ ಎರಡು ಮಾತಿಲ್ಲ. ಕನಕದಾಸರು ಯಾವುದೇ ನಿಶ್ಚಿತ ಗುರುವನ್ನು ಹೊಂದಿದವರಲ್ಲದಿದ್ದರೂ ಎಲ್ಲ ಗುರುಗಳನ್ನು ಶ್ರದ್ಧಾ ಭಕ್ತಿಯಿಂದ ಗೌರವಿಸುತ್ತಿದ್ದರು. ಕೆಲವು ಸಲ ತಮ್ಮ ಭೌದ್ಧಿಕ ಚತುರತೆಯಿಂದ ಗುರುಗಳನ್ನೇ ದಿಗ್ಭ್ರಾಂತರನ್ನಾಗಿಸಿ ಅವರಿಂದ ಪ್ರಶಂಸೆಗೆ ಪಾತ್ರರಾಗುತ್ತಿದ್ದರು. ಗುರು ಕಾರುಣ್ಯದೊಂದಿಗೆ ಇತರ ಬ್ರಾಹ್ಮಣ ಶಿಷ್ಯಂದಿರಿಗೆ ಮಾದರಿಯಾಗಿದ್ದರು. ತಾತಾಚಾರ್ಯ, ವಾದಿರಾಜ, ವ್ಯಾಸರಾಯರಾದಿಯಾಗಿ ಕನಕದಾಸರಿಗೆ ದಾಸ ದೀಕ್ಷೆ ಕೊಡುವಲ್ಲಿ ವಿಫಲರಾದರು ಅದಕ್ಕೆ ಪ್ರಮುಖ ಕಾರಣ ಮೇಲ್ವರ್ಗದ ಪಂಡಿತರ ವಿರೋಧ.

ಕನಕದಾಸರ ದೃಷ್ಟಿಯಲ್ಲಿ ಸ್ವಯಂ ಹರಿಯೇ ಗುರುವಾಗಿದ್ದಾನೆ. ಹರಿ ಅಪ್ರತ್ಯಕ್ಷರೂಪದಲ್ಲಿ ಗುರುವಾಗಿ ಬಂದು ಜ್ಞಾನಪ್ರದಾನ ಮಾಡಿದನೆಂಬುದು ಕನಕ ದಾಸರ ನಂಬಿಕೆಯಾಗಿತ್ತು. ಕನಕದಾಸರು ಹರಿಯ ಪಾದ ಕಮಲಗಳಲ್ಲಿ ಏಕಾಗ್ರತೆಯಿಂದ ಧ್ಯಾನಿಸಿ ಪೂಜಿಸಿದ ಪ್ರತಿಫಲವೇ ಆಗಿದೆ:

ಹರಿ ನಿಮ್ಮ ಪದ ಕಮಲನಿರುತ ಧ್ಯಾನದಿ ಎನಗೆ
ದೊರಕಿತೀ ಗುರು ಸೇವೆ ಹರಿಯೆ[1]

ಎಂದು ಹೇಳಿ ಕೃತಾರ್ಥರಾಗಿದ್ದಾರೆ.

ಕನಕದಾಸರು ಡಣಾಯಕ ಕಲಿಯಾಗಿ ಹೋರಾಡಿದರು. ಯುದ್ಧರಂಗದಲ್ಲಿ ಆದ ಸಾವು ನೋವು, ರಕ್ತಪಾತ ಇವೆಲ್ಲವೂ ಅವರನ್ನು ಮಾನಸಿಕವಾಗಿ ಹಿಂಸಿಸಿ ಸರ್ವಸಂಗ ಪರಿತ್ಯಾಗಿಯಾಗಿ ವೈರಾಗ್ಯದೆಡೆಗೆ ತಳ್ಳಿದವು. ದೊರೆತನದಿಂದ ಸನ್ಯಾಸತ್ವದೆಡೆಗೆ ಸಾಗುವ ನಿರ್ಧಾರದಿಂದ ಕನಕದಾಸರು ಭಗವಂತನ ಸಾಕ್ಷಾತ್ಕಾರದತ್ತ ತೆರಳಿದರು:

ದೊರೆತನವ ಬಿಡಿಸಿ ಸುಸ್ಥಿರ ಮಾರ್ಗತೋರಿಸಿದೆ
ನರಮಾತ್ರದವನೆನದೆ ಹರಿಯೆ
ಗರುವದೊಳಗಿಹನೆಂದು ಅರಿತು ತವದಾಸರಿಗೆ
ಇರದೆ ಅಡಿಯಾಗಿಸಿದೆ ಹರಿಯೆ

ಪರಮ ಮೂರ್ಖನು ನಾನು ವರವೀರ ವೈಷ್ಣವರ
ಚರಣವನು ಸೇರಿಸಿದೆ ಹರಿಯೆ
ಕರೆ ಕಳಿಸಿ ಎನ್ನಲ್ಲಿ ಅಳವಿಲ್ಲದಿಹ ನಾಮ
ಸ್ಮರಣೆ ಜಿಹ್ವೆಗೆ ಬರೆದೆ ಹರಿಯೆ[2]

ಕನಕದಾಸರು ಜ್ಞಾನಿಗಳಾಗಿದ್ದರೂ ತಮ್ಮನ್ನು ಮೂರ್ಖರೆಂದು ಸಂಬೋಧಿಸಿಕೊಂಡು ವೈಷ್ಣವ ಮತದ ಗುರುಗಳಾದ ವ್ಯಾಸರಾಯರ ಚರಣದಡಿಯಲ್ಲಿ ನನ್ನನ್ನು ಶಿಷ್ಯನಾಗಿಸಿದೆ ಎಂದು ಹರಿಯನ್ನು ಕೊಂಡಾಡಿದ್ದಾರೆ.

ಕನಕದಾಸರು ಹರಿಯನ್ನು ಕೊಂಡಾಡುತ್ತ ನನ್ನ ನಾಲಿಗೆಯ ಮೇಲೆ ನಿನ್ನ ನಾಮವ ಬರೆದು ನಿನ್ನ ವಿವಿಧ ನಾಮಗಳನ್ನೂ ಸ್ಮರಿಸುವಂತೆ ಮಾಡಿರುವೆ. ನಿನ್ನ ನೋಡುವ ಭಾಗ್ಯ ನನಗೆ ಕರುಣಿಸಿ ನನ್ನನ್ನು ಪುನಿತನನ್ನಾಗಿ ಮಾಡು. ನೀನು, ನನ್ನ ದೈವವೂ ಹಾಗೂ ಗುರುವೂ ಆಗಿರುವೆ. ನಾ ನಿನ್ನ ಅಡಿದಾಸ. ಈ ದಾಸನ ಕೂಗಿನ ದನಿ ಕೇಳಿ ನನ್ನನ್ನು ಅನುಗ್ರಹಿಸು ಎಂದು ಕನಕದಾಸರು ಪರಿ–ಪರಿಯಾಗಿ ಹರಿಯಲ್ಲಿ ಮೊರೆ ಹೋಗಿದ್ದಾರೆ. ಕನಕದಾಸರು ವಿವೇಕಿಗಳಾಗಿದ್ದರೂ ಹರಿಯ ಮುಂದೆ ವಿವೇಕದ ಭಿಕ್ಷೆ ಬೇಡಿದ್ದು ವಿಶೇಷವಾಗಿದೆ. ಢಾಂಬಿಕತೆ ಮೆರೆಸಿ ವಂಚಿಸುವ ಕಾಯಕದಲ್ಲಿ ನಿತ್ಯವೂ ತೊಡಗಿದ್ದ ಅವಿವೇಕಿ ಬ್ರಾಹ್ಮಣರು ಕೂಡ ಹರಿಯನ್ನೇ ಸ್ವಾರ್ಥಕ್ಕೆ ಬಳಸಿಕೊಂಡಿರುವುದನ್ನು ಖಂಡಿಸಿದ್ದಾರೆ.

ಕನಕದಾಸರು ಮೇಲ್ವರ್ಗದವರ ಉಪಟಳದಿಂದ ರೋಸಿಹೋಗಿದ್ದ ದಲಿತರ ಪರ ಹೋರಾಟಕ್ಕಿಳಿದರು. ಕನಕದಾಸರು ಹರಿಯ ನೈಜ ಭಕ್ತರಾಗಿದ್ದರು. ಅವರ ಸಾಮಾಜಿಕ ಸ್ಥಾನಮಾನಕ್ಕೆ ಅಡ್ಡಬಂದದ್ದು ಜಾತಿಯಾಗಿತ್ತು. ಜಾತೀಯತೆಯ ಅನಿಷ್ಠತೆಯಿಂದ ಮುಕ್ತರಾಗುವ ಉದ್ದೇಶದಿಂದ ತಮ್ಮ ಕೀರ್ತನೆಗಳ ಮುಖಾಂತರ ಬಂಡಾಯ ಕೈಗೊಂಡರು. ಅದಕ್ಕೆ ಪ್ರತಿಯಾಗಿ ಕನಕದಾಸರು ಬ್ರಾಹ್ಮಣರಿಂದ ಮಾನಸಿಕ ಹಾಗೂ ದೈಹಿಕ ಹಿಂಸೆಗೊಳಗಾದರು. ಕನಕದಾಸರಿಗೆ ವ್ಯಾಸರಾಯರು ಗುರುವಾಗಿದ್ದುದು ಬ್ರಾಹ್ಮಣರಿಗೆ ನುಂಗಲಾರದ ತುತ್ತಾಯಿತು. ವ್ಯಾಸರಾಯರ ವಿರುದ್ಧವೂ ಬ್ರಾಹ್ಮಣರು ಕೆಂಡ ಕಾರಿದರು. ಆದರೂ ವ್ಯಾಸರಾಯರು ಕನಕನನ್ನು ತಿರಸ್ಕರಿಸಲಿಲ್ಲ. ಇಡೀ ಬ್ರಾಹ್ಮಣ ಸಮುದಾಯಕ್ಕೆ ದೊಡ್ಡ ಸವಾಲಾದ ವ್ಯಾಸರಾಯರು ಧೃತಿಗೆಡಲಿಲ್ಲ. ಜಾತಿಗಿಂತ ನೀತಿ ಮೇಲು ಎಂಬುದನ್ನು ಮಠಿಕರಿಗೆ ಮನವರಿಕೆ ಮಾಡಿಕೊಟ್ಟರು. ಹರಿದಾಸ ಪರಂಪರೆಯಲ್ಲಿ ವ್ಯಾಸರಾಯರಿಂದ ಇದೊಂದು ಅಭೂತಪೂರ್ವ ದಾಖಲೆಯಾಯಿತು.

ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು
ಪದುಮನಾಭನ ಪಾದದೊಲುಮೆ ಎನಗಾಯಿತು[3]

ಕನಕದಾಸರಿಗೆ ಕಡುವೈರಿಗಳಾಗಿದ್ದ ಮಠಿಕರು ಅವರು ಕೆಳಜಾತಿಯವರೆಂಬ

ಕಾರಣದಿಂದ ಅವರ ಜ್ಞಾನವನ್ನು ಒಪ್ಪಿಕೊಳ್ಳಲಿಲ್ಲ. ದಿವ್ಯಜ್ಞಾನಿಯಾದ ಕನಕದಾಸರನ್ನು ತುಳಿಯಲು ಪ್ರಯತ್ನಿಸಿ ಅವರ ಸಾಹಿತ್ಯವನ್ನು ಸುಳ್ಳೆಂದು ಹೇಳಿದರು. ಕೆಳಜಾತಿಯ ಕುರುಬನೆಂಬ ಕಾರಣಕ್ಕೆ ಬ್ರಾಹ್ಮಣರಿಗೆ ಕನಕದಾಸರ ಸಾಹಿತ್ಯ ಅಪ್ರಿಯವಾಗಿ ಕಂಡಿತು.

ಮೇಲ್ವರ್ಗದವರೆಂದು ಹಣೆಪಟ್ಟಿ ಕಟ್ಟಿಕೊಂಡು ಅಹಂಕಾರದಿಂದ ಮೆರೆಯುತ್ತಿದ ವೈಷ್ಣವರನ್ನು ಬಂಡಾಯದ ಮುಖಾಂತರ ಎಚ್ಚರಿಸಿ ಸಕಲರನ್ನೂ ಸಮಾನ ವೇದಿಕೆಗೆ ತರುವಲ್ಲಿ ಯಶಸ್ವಿ ಹೋರಾಟದೊಂದಿಗೆ ದಲಿತರ ಹಿತಚಿಂತನೆಗೆ ಪಾತ್ರರಾಗಿದ್ದಾರೆ.

ಕನಕದಾಸರು ಮೂಲತಃ ಕವಿಯಾಗಿ ತದನಂತರ ಕೀರ್ತನಕಾರರಾದರೆಂದು ಅವರ ಕೀರ್ತನೆಗಳ ಮುಖಾಂತರ ತಿಳಿದು ಬರುತ್ತದೆ. ತಂದೆ ಬೀರಪ್ಪ ದಂಡನಾಯಕರಾಗಿ ಸೇವೆ ಸಲ್ಲಿಸುವ ಸಂದರ್ಭದಲ್ಲಿ ತೀರಿಕೊಂಡರು. 1509ರಲ್ಲಿ ವಿಜಯನಗರದ ಅರಸು ಕೃಷ್ಣದೇವರಾಯ ಕನಕನನ್ನು ಬಾಡ-ಬಂಕಾಪುರ-ಕಾಗಿನೆಲೆ ಪ್ರಾಂತ್ಯಕ್ಕೆ ದಂಡನಾಯಕನನ್ನಾಗಿ ನೇಮಿಸಿದನು. ಬಾಲ್ಯದಲ್ಲಿಯೇ ತಂದೆಯಿಂದಲೇ ತರ್ಕ, ವ್ಯಾಕರಣ ಮೀಮಾಂಸೆ, ಯುದ್ಧ ಕಲೆಯಲ್ಲಿ ಪಾರಂಗತನಾಗಿದ್ದ ಕನಕ ತನ್ನ ಡಣಾಯಕ ಅಧಿಕಾರದ ಅವಧಿಯಲ್ಲಿ 15-16ನೇ ವಯಸ್ಸಿನಲ್ಲಿ 25-26 ವರ್ಷಗಳ ಕಟ್ಟಾಳುವಿನಂತೆ ದಿಟ್ಟ ತನದ ಯೋಧನಾಗಿ ಹೊರಹೊಮ್ಮಿದ.

ಕವಿಯಾಗಿ ಸಮಾಜ ಸುಧಾರಣೆಯ ವಿಚಾರದಲ್ಲಿ ತೊಡಗಿದರೆ ಕಲಿಯಾಗಿ ಇಡೀ ಪ್ರಾಂತ್ಯವನ್ನು ರಕ್ಷಿಸುವ ಹೊಣೆ ಕನಕನಿಗೆ ಒದಗಿ ಬಂದಿತ್ತು. ಕನಕ ಯುದ್ಧ ಕಲೆಯಲ್ಲಿ ಪ್ರಾವಿಣ್ಯತೆ ಹೊಂದಿದ್ದರಿಂದ ಕೃಷ್ಣದೇವರಾಯನು ಕನಕನನ್ನು ಗೌರವಾದರಗಳೊಂದಿಗೆ ವಿಶೇಷ ಸ್ಥಾನಮಾನಗಳನ್ನು ಕೊಟ್ಟಿದ್ದನು.

ಇಹ-ಪರಗಳ ವಿಶೇಷತೆಯನ್ನು ಅರಿತುಕೊಂಡಿದ್ದ ಕನಕದಾಸರು ಹುಟ್ಟು-ಸಾವಿನ ಮಧ್ಯದ ಬದುಕಿನಲ್ಲಿ ಮಾನವೀಯ ಗುಣಗಳ ಮಹತ್ವ ಕುರಿತು ಜನರಿಗೆ ಅರುಹಿದರು. ಪಾಪ-ಪುಣ್ಯ ಮತ್ತು ಸ್ವರ್ಗ-ನರಕಗಳ ಮಾರ್ಗಗಳಲ್ಲಿ ಅನುಭವಿಸಬೇಕಾದ ಕಷ್ಟ ಸುಖಗಳನ್ನು ಅರುಹಿದರು. ಆದರೆ ಪುಣ್ಯ ಕಾರ್ಯಗಳ ಬಗ್ಗೆ ಅರಿಯದ ಅಜ್ಞಾನಿಗಳು ಕನಕದಾಸರ ಉಪದೇಶಗಳನ್ನು ಧಿಕ್ಕರಿಸಿದರು. ಜೊಳ್ಳು ಮಂತ್ರ ಜಪಿಸಿ ಪಾರಮಾರ್ಥಿಕವಾಗಿ ದೂರ ಉಳಿಯುವರೆಂದು ಕನಕದಾಸರು ತಮ್ಮ ಗಣನೆಗೆ ತೆಗೆದುಕೊಳ್ಳದಾದರು. ಶೂದ್ರನ ಉಪದೇಶ ಅಪ್ರಿಯವಾಗಿ ಕಂಡಿತು. ಕೀಳು ಜಾತಿಯ ಪ್ರಶ್ನೆಯೂ ಅಲ್ಲಿ ಹುಟ್ಟಿಕೊಂಡು ದಲಿತರನ್ನು ತಿರಸ್ಕಾರಕ್ಕೊಳಪಡಿಸಿತು.

ಯುದ್ಧದಲ್ಲಿ ನಡೆದ ಸಾವು-ನೋವುಗಳಿಂದ ನೊಂದ ಕನಕರು ಸ್ವತಃ ತಾವೇ ಜೀವಂತ ಹೆಣವಾಗಿ ಬಿಡುತ್ತಾರೆ. ಕಾಗಿನೆಲೆ ಯಾದಿಕೇಶವನ ಸ್ಮರಣೆಯೊಂದಿಗೆ ಮರುಜೀವ ಪಡೆದು ಲೋಕಸಂಚಾರದಲ್ಲಿ ಮುಂದುವರೆದು ಸಮಾಜದ ಅಶಾಂತಿಯನ್ನು ಹೋಗಲಾಡಿಸಿ ಶಾಂತಿ ಸ್ಥಾಪಿಸಲು ಮುಂದಾಗುತ್ತಾರೆ.

ರಣದೊಳಗೆ ಅಂಗಾಂಗ ಖಂಡ ತುಂಡಾಗಿ ಪ್ರತಿ
ರಣವನುತ್ತರಿಸಿ ಮರಣವ ತಾಳಿರೆ
ಪ್ರಣವ ಗೋಚರ ನೀನು ಗೋಚರಿಸಿ ಬಂದೆನ್ನ
ಹೆಣಕೆ ಪ್ರಾಣವ ಪ್ರಯೋಗಿಸಿದಂತರಾತ್ಮ[4]

ಸ್ವತಃ ಹರಿಯು ಬಂದು ತನ್ನ ಕೊಳಲಿನಿಂದ ನಾದವುಸುರುತ್ತ ಕನಕದಾಸರ ಹಣೆಯ ನೇವರಿಸಿ ಬದುಕಿಸಿದನೆಂದು ಕನಕರೇ ತಮ್ಮ ಕೀರ್ತನೆಯ ಇನ್ನೊಂದು ಚರಣದಲ್ಲಿ ಹೇಳಿದ್ದಾರೆ.

ಕ್ಷೀಣ ದೇಹವ ಬಿಡುವೆನೆಂದು ಪಾಡಂಬಟ್ಟು
ತ್ರಾಣದಲಿ ಗರಳ ತೈಲದ ಸೇವಿಸೆ
ವೇಣು ನಾದದಲಿ ಹಣೆಯ ನೇವರಿಸಿ ಪಂಚ
ಪ್ರಾಣ ಪ್ರತಿಷ್ಠೆಯ ಮಾಡಿದೆ ಮಹಾತ್ಮ[5]

ಕನಕದಾಸರ ಜೀವನದ ತಿರುವಿಗೆ ಕಾರಣವೆನ್ನಬಹುದಾದ ಯುದ್ಧ, ಕನಕದಾಸರನ್ನು ಆದಿಕೇಶವನ ಹುಡುಕಾಟದೊಂದಿಗೆ ದಾಸ ಮಾರ್ಗ ಹಿಡಿಸಿದುದು ನಿಜಕ್ಕೂ ವಿಚಿತ್ರವೆನಿಸುತ್ತದೆ. ಕನಕದಾಸರನ್ನು ಶ್ರೇಷ್ಠ ದಾಸನನ್ನಾಗಿಸಿಕೊಳ್ಳಬೇಕೆಂದು ಹರಿಯು ಅವರನ್ನು ವಿವಿಧ ಸಂಕಟಕ್ಕೊಳಪಡಿಸಿ ವೈರಾಗ್ಯ ಹೊಂದುವಂತೆ ಮಾಡಿದುದು ಒಂದು ಪವಾಡ ಸದೃಶವಾಗಿದೆ.

ಹರಿಯ ದಾಸನಾಗುವವನಿಗೆ ಜಾತಿಯ ಸೋಂಕಿಲ್ಲ. ಅವನು ಯಾರ ಹಂಗಿನಲ್ಲೂ ಇರುವವನಲ್ಲ. ಭಕ್ತಿಯ ಶಕ್ತಿ ಮತ್ತು ಆರಾಧನೆಯಲ್ಲಿಯ ಏಕಾಗ್ರತೆ ಇರುವ ಎಲ್ಲರೂ ಹರಿಯ ಭಜಿಸಬಹುದು. ಹರಿ ದಾಸರಾಗುವುದಕ್ಕೆ ಗುರುಕುಲದಲ್ಲಿ ಸಂಸ್ಕೃತ ಕಲಿಯಬೇಕಾಗಿಲ್ಲ. ವೇದಾಧ್ಯಯನಗಳ ಅವಶ್ಯಕತೆಯೂ ಇಲ್ಲ. ಉನ್ನತ ಕುಲದವರೆನೆಸಿಕೊಂಡರೂ ಅರ್ಹತೆ ಇಲ್ಲದೆ ಹರಿದಾಸರಾಗುವುದಿಲ್ಲ. ಹರಿಯನ್ನು ಪ್ರತ್ಯಕ್ಷ ಕಾಣುವ ಹಂಬಲ ಉಳ್ಳವರು ತಮ್ಮ ತನು-ಮನ-ಧನಗಳೆಲ್ಲವನ್ನೂ ಹರಿಯ ಮಾರ್ಗದಲ್ಲಿ ಧಾರೆ ಎರೆದರೆ ಹರಿದಾಸರಾಗಬಹುದು. ಆದಿಕೇಶವನಿಗೆ ಯಾವುದೇ ಜಾತಿ ಇಲ್ಲ. ಎಲ್ಲ ಜಾತಿಯ ಜನರನ್ನೂ ಅವನು ರಕ್ಷಿಸುವವನಾಗಿದ್ದಾನೆ. ವಿಷ್ಣು ವೈಷ್ಣವರಿಗಷ್ಟೇ ಸೀಮಿತವಾಗಿರದೆ ಸಕಲ ಜೀವಾತ್ಮಗಳ ಪೋಷಕನಾಗಿದ್ದಾನೆ. ಶೂದ್ರರೆಂದರೆ ಪ್ರಾಣಿಗಳಲ್ಲ ಅವರೂ ಮಾನವರಾಗಿದ್ದು ದೈವ ಭಕ್ತಿ ಉಳ್ಳವರಾಗಿದ್ದಾರೆ. ಮಾನವನಿಗೆ ಮಾನವೀಯ ಗುಣಗಳೇ ದೀಕ್ಷಾ ವಿಧಿ ವಿಧಾನಗಳಾಗಿದ್ದು ಅದು ಹರಿಯಿಂದ ದೊರೆಯುವಂಥದ್ದಾಗಿದೆ. ಕಾಟಾಚಾರದ ಮಂತ್ರಪಠಣ, ಢಾಂಬಿಕ ಭಕ್ತಿ. ಮಿಥ್ಯಾಡಂಬರ. ಸುಳ್ಳು ಉಪದೇಶ ಇವೆಲ್ಲವೂ ಹರಿಗೆ ಅಪ್ರಿಯವಾಗಿವೆ. ಪರಿಶುದ್ಧ ಮನಸ್ಸಿನಿಂದ ಹರಿಯ ಭಜಿಸುವ ದಲಿತನಿಗೂ ಹರಿಯ ಒಲುಮೆಯಾಗುತ್ತದೆ ಎಂದಿದ್ದಾರೆ ಕನಕದಾಸರು. ಕನಕದಾಸರು ಆಡಿದ ಮಾತುಗಳು ಸಂಪ್ರದಾಯಬದ್ಧ ಬ್ರಾಹ್ಮಣರನ್ನು ನಿದ್ದೆಗೆಡಿಸಿದ್ದವೆಂಬುದು ಕೀರ್ತನೆಗಳಲ್ಲಿ ಕಾಣಬಹುದು.

ಯುದ್ಧದ ಮುಖಾಂತರ ಕಂಡುಂಡ ಕಹಿ ಅನುಭವಗಳು ಕನಕದಾಸರನ್ನು ಆಧ್ಯಾತ್ಮದೆಡೆಗೆ ಕೊಂಡೊಯ್ದುವು ಆದಿಕೇಶವನ ಆರಾಧನೆಯೊಂದಿಗೆ ಸಮಾಜ ಸುಧಾರಣಾ ಕಾರ್ಯದಲ್ಲಿ ತೊಡಗಿ ದಲಿತೋದ್ಧಾರದೆಡೆಗೆ ನಡೆದರು.

ಕನಕದಾಸರ ಪಾಂಡಿತ್ಯ ಹಾಗೂ ತಾರ್ಕಿಕ ವಿಚಾರಗಳು ವ್ಯಾಸರಾಯರ ಶಿಷ್ಯಂದಿರನ್ನು ಸಂಕಟಕ್ಕೆಡೆ ಮಾಡಿಕೊಟ್ಟು ಕನಕದಾಸರನ್ನು ಹಿಂಸೆಗೀಡುಮಾಡಲಾರಂಭಿಸಿದವು. ನೀನು ಯಾತರವನು? ಕುಲವಾವುದು? ಗೋತ್ರವಾವುದು? ನಿನ್ನಂಥವರು ನಮ್ಮ ಮಠದಲ್ಲಿರುವುದು ಸೂಕ್ತವೆ? ಎಂಬ ಪ್ರಶ್ನೆಗಳು ಕನಕದಾಸರನ್ನು ದಿಗ್ಭ್ರಾಂತನನ್ನಾಗಿಸಿದ್ದವು. "ನನ್ನನ್ನು ನಾನು ಯಾತರೆವನೆಂದು ಹೊಗಳಿಕೊಳ್ಳಲಿ. ನಾನೂ ನಿಮ್ಮಂತೆ ಮನುಷ್ಯನೇ ಆಗಿದ್ದೆನೆ. ಜಗದೊಡೆಯನಾದ ಪರಮಾತ್ಮನು ನಿಮ್ಮಂತೆಯೇ ನನ್ನನ್ನೂ ನರರೂಪದೊಂದಿಗೆ ಸೃಷ್ಟಿಸಿದ್ದಾನೆ. ನಿಮ್ಮಂತೆಯೇ ನಾನೂ ಮನುಷ್ಯ. ನನ್ನದು ಅಪ್ಪಟ ಮನುಜ ಕುಲ" ಎಂದು ತಮ್ಮನ್ನು ಕಿರುಕುಳಕ್ಕೊಳಪಡಿಸಿದ ವೈದಿಕರನ್ನುದ್ದೇಶಿಸಿ ಹೀಗೆ ಹೇಳಿದ್ದಾರೆ:

ಯಾತರವನೆಂದುಸರಲಿ –ಜಗ
ನ್ನಾಥ ಮಾಡಿದ ಒಂದು ನರರೂಪವಯ್ಯ[6]

ಎಂದು ಪಂಡಿತೋತ್ತಮರಿಗೆ ಮನುಷ್ಯನ ನಿಜರೂಪವನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ. ತಾಯಿಯ ಗರ್ಭದಲ್ಲಿ ಮುಟ್ಟಿನ ರೂಪದಲ್ಲಿ ನಿಂತು ಒಂಭತ್ತು ತಿಂಗಳು ಕಳೆದು ಯಾವ ಜಾತಿಯ ಪರಿಕಲ್ಪನೆ ಇಲ್ಲದೇ ಮಾಂಸದ ಮುದ್ದೆಯಾಗಿ ಭುವಿಯ ಮೇಲೆ ಬಿದ್ದವನು ನಾನು. ಹೀಗಿರುವಾಗ ನಾನಾವ ಕುಲದವನೆಂದು ಹೇಳಲಿ? ಇಂದ್ರಿಯಗಳ ಮೈಲಿಗೆ ಮಲ–ಮೂತ್ರಗಳ ದುರ್ಗಂಧವುಳ್ಳ ಸ್ಥಳದಲ್ಲಿ ನಿಂತು ಹೊರಳಾಡಿ ಯೋನಿ ಮಾರ್ಗದಿಂದ ಬಂದವನು. ಮಾಂಸದ ಮೊಲೆಗಳನ್ನು ಜಗಿದು ಸೂಸಿದ ಹಾಲನ್ನು ಸೇವಿಸಿ ಪ್ರಪಂಚದ ಅರಿವನ್ನೇ ಹೊಂದಿರದ ಅಂಧಕನು ನಾನು. ನರರೂಪದ ಜೀವಾತ್ಮನೆಂದು ನನ್ನನ್ನು ಕರೆಯುವರು. ನನ್ನಂತೆ ನೀವೂ ಯೋನಿಮಾರ್ಗದಲ್ಲಿಯೇ ಬಂದಿರುವಿರಿ. ನಿಮ್ಮದೇಕೆ ಉನ್ನತ ಕುಲ? ನನ್ನದೇಕೆ ಕೀಳು ಕುಲ? ಎಂದು ಬಂಡಾಯ ಪೂರ್ವಕವಾಗಿ ಪಂಡಿತರನ್ನು ಪ್ರಶ್ನಿಸಿದ್ದಾರೆ. ನವರಂಧ್ರಗಳಲ್ಲಿ ಸೂಸುವ ಹೊಲಸು ಕೊಡದಂತೆ ತುಂಬಿ ತುಳುಕುತ್ತಿರುವ ನರಮಾನವನು ಇಂಬಿಲ್ಲದ ಗರ್ಭದ ಕಾರಾಗೃಹದ ಹೊಲಸಿನ ವಾಸನೆಯನ್ನು ಸೇವಿಸಿ ಹೊರಬಂದು ಡಂಬಕನಂತೆ ವರ್ತಿಸುವ ನನಗೆ ಇನ್ಯಾತರ ಕುಲವಿಹುದು. ನನ್ನದು ಮನುಕುಲ ಮಾತ್ರ. ಎಂದು ಹೇಳಿದ ಕನಕದಾಸರು ಮೇಲ್ವರ್ಗದವರಲ್ಲಿಯ ಮಾನವೀಯತೆ ಗುರುತಿಸಿಕೊಳ್ಳಲು ಸಲಹೆಯಿತ್ತಿದ್ದಾರೆ.

ಮುಟ್ಟು ಹುಟ್ಟಿನೊಳು ನೆಟ್ಟನೆ ನಾ ಬಂದೆ
ತೊಟ್ಟಿದ್ದೆನಾಗ ತೊಗಲ ಬಕ್ಕಣ
ಇಷ್ಟರೊಳಗೆ ಒಂದು ವಿವರವರಿಯದಂಥ
ಭ್ರಷ್ಟಗೆ ನನಗಿನ್ಯಾತರ ಕುಲವಯ್ಯ[7]

ಒಂಭತ್ತು ಎಜ್ಜದೊಳೊಸರುವ ಹೊಲಸದು
ತುಂಬಿ ತುಳುಕುವ ಕೊಡವಾಗಿರಲು
ಇಂಬಿಲ್ಲದೆ ಹೊಲೆಗೊಂಡ ಠಾವಿನಲಿ ಬಂದಂಥ
ಡಂಬಕ ನನಗಿನ್ಯಾತರ ಕುಲವಯ್ಯ

ಕರುಳು ಖಂಡ ನಾರುವ ಚರ್ಮರೋಹಿತ
ನರಪಂಜರದೀ ಹುರುಳಿಲ್ಲದ
ನರದೇಹ ಹೊತ್ತು ತಿರುಗುವಂಥ
ತಿರುಕ ನನಗಿನ್ಯಾತರ ಕುಲವಯ್ಯ[8]

ಎಂದು ತಮ್ಮ ಹುಟ್ಟಿನ ಸ್ಥಿತಿ-ಗತಿಗಳನ್ನು ಕೀರ್ತನೆಗಳಲ್ಲಿ ಹೇಳಿಕೊಂಡು ಜಾತಿವಾದಿಗಳನ್ನು ಎಚ್ಚರಿಸಿದ್ದಾರೆ. ಅಸ್ತಿ-ಚರ್ಮ ಮಾಂಸಗಳಿಂದ ಕೂಡಿದ ದೇಹವನ್ನು ಹೊತ್ತು ತಿರುಗುವ ನೀವೂ ನರಮನುಷ್ಯರು, ಆಗಿರುವಾಗ ನನ್ನನ್ನು ಯಾತರವನೆಂದು ಕೇಳುವುದು ಸರಿಯೇ? ಪರಮಾತ್ಮನು ಸೃಷ್ಟಿಸಿದ ಈ ದೇಹದಲ್ಲಿ ಸತ್ಯಾತ್ಮನಿದ್ದಾನೆ. ಪರರ ಕುಲದ ಕುರಿತು ಪ್ರಶ್ನಿಸುವುದು ನಿಮ್ಮ ಹೆಡ್ಡತನವಾಗಿದ್ದು ಅದರಿಂದ ಹೊರಬಂದು ನೀವು ಮೊದಲು ಮನುಷ್ಯರಾಗಿರಿ ಎಂದಿದ್ದಾರೆ ಕನಕದಾಸರು.

ಕನಕದಾಸರ ಕಾಲಾವಧಿಯು ಬಹುಸಂಖ್ಯಾತ ಬ್ರಾಹ್ಮಣರಿಂದ ಕೂಡಿದ ಸಮಾಜವಾಗಿತ್ತು. ಶೂದ್ರರು ಅವರ ಅಡಿಯಾಳಾಗಿ ಕೆಲಸ ಮಾಡುವ ದುರ್ಗತಿ ಇತ್ತು. ಅಸ್ಪೃಶ್ಯರೆಂಬ ಕಾರಣಕ್ಕೆ ಬ್ರಾಹ್ಮಣರು ಇವರೊಂದಿಗೆ ವ್ಯವಹರಿಸದೇ ಊರಿನ ಹೊರಗೇ ಇವರನ್ನು ಇರುವಂತೆ ಮಾಡಿದ್ದರು. ಅವಕಾಶವಾದಿಗಳಾದ ಅವರು ಶೂದ್ರರ ಅವಶ್ಯಕತೆ ಊರಲ್ಲಿದ್ದಾಗ ಮಾತ್ರ ಪ್ರವೇಶದ ಅವಕಾಶ ಕೊಡುತ್ತಿದ್ದರು. ಈ ತಾರತಮ್ಯ ಶೂದ್ರರಾದ ಕುರುಬರನ್ನು ಕಾಡದೇ ಇರಲಿಲ್ಲ. ಕನಕದಾಸರು ಶೂದ್ರರಾದದ್ದರಿಂದ ಅವರ ಆಚಾರ-ವಿಚಾರ ತರ್ಕ, ಸಂವಾದಗಳನ್ನೆಲ್ಲ ಭ್ರಾಹ್ಮಣರು ಗಣನೆಗೆ ತೆಗೆದುಕೊಳ್ಳದೆ ಹೋದರು. ಕನಕದಾಸರನ್ನು ಅತ್ಯಂತ ಹೀನಾಯ ದೃಷ್ಟಿಯಿಂದ ಕಾಣುತ್ತಿದ್ದ ಬ್ರಾಹ್ಮಣರು ಸಂಸ್ಕೃತ ಭಾಷೆಯಲ್ಲಿ ವೇದ ಕಲಿತರೆ ಮಾತ್ರ ಪಾಂಡಿತ್ಯ ಹೊಂದಲು ಸಾಧ್ಯವೆಂದರು. ಕನಕದಾಸರ ಆಂತರಿಕ ಜ್ಞಾನ ಹಾಗೂ ಪಾಂಡಿತ್ಯವೆಲ್ಲವೂ ಸುಳ್ಳೆಂದು ಹೇಳಿ ಅವರ ಮಾರ್ಗವನ್ನು ಯಾರೂ ಅನುಸರಿಸಬಾರದೆಂದು ಬಹಿರಂಗವಾಗಿ ಹೇಳಿದರು. ಕುರುಬನಾದರೇನು, ಬ್ರಾಹ್ಮಣನಾದರೇನು ಅಂತರಂಗ ಶುದ್ಧಿಯಿಂದ ಭಗವಂತನ ಆರಾಧನೆ ಮಾಡಿದರೆ ಎಲ್ಲವೂ ಪವಿತ್ರವೇ ಎಂದಿದ್ದಾರೆ ಕನಕದಾಸರು. ಪಾಂಡಿತ್ಯ ಹೊಂದಲು ಬಯಸುವ ದಲಿತರ ಪ್ರಯತ್ನವನ್ನು ಅಪವಿತ್ರವೆಂದರೆ ಅದು ಮಾನವೀಯತೆಗೆ ಎಸಗುವ ಅಪಚಾರವೆಂದು ಕನಕ ದಾಸರು ಬ್ರಾಹ್ಮಣರನ್ನು ಹೀಗೆ ವ್ಯಂಗ್ಯಮಾಡಿದ್ದಾರೆ:

ನಾವು ಕುರುಬರು, ನಮ್ಮ ದೇವರು ಬೀರಯ್ಯ
ಕಾವ ನಮ್ಮಜ್ಜ ನರಕುರಿಯ ಹಿಂಡುಗಳ[9]

ಈ ಕೀರ್ತನೆಯ ಸಾಲುಗಳನ್ನು ಓದಿ ಅರ್ಥೈಸುವುದಾದರೆ ಭಗವಂತನಿಂದ ಸೃಷ್ಟಿಸಲ್ಪಟ್ಟ ಈ ಜಗತ್ತೇ ಒಂದು ಕುರಿಯ ದೊಡ್ಡಿಯಾಗಿದೆ. ಆ ದೊಡ್ಡಿಯಲ್ಲಿ ಎಲ್ಲ ನರಮನುಷ್ಯರು ಕುರಿಗಳಿದ್ದಂತೆ. ಹೇಗೆ ಕುರುಬ ತನ್ನ ಕುರಿಗಳನ್ನು ಅಹೋರಾತ್ರಿ ಸಂರಕ್ಷಿಸಿ ಬೆಳೆಸುವನೋ ಹಾಗೆಯೇ ಜಗನ್ನಾಥನಾದ ಪರಮಾತ್ಮನು ಈ ಲೋಕದ ಜನರನ್ನು ಸಂರಕ್ಷಿಸುತ್ತಾನೆ. ಜಗದ ಜನರೆಲ್ಲರೂ ಆತನ ಸಂರಕ್ಷಣೆಯೊಂದಿಗೆ ಜೀವನ ನಡೆಸುವವರಾಗಿದ್ದಾರೆ.. ಭಗವಂತ ಕುರಿಕಾಯುವ ಕುರುಬನಾದರೆ ನರಕುರಿಗಳು ನಾವೆಲ್ಲರೂ ಆಗಿದ್ದೇವೆ. ಜನನ್ನಾಥನಾದ ಹರಿಯ ಶ್ರೀ ರಕ್ಷೆಯಲ್ಲಿ ಬೆಳೆವ ಮನುಷ್ಯರೆಲ್ಲರೂ ಕುರಿಗಳೆಂದು ಅರುಹಿದ್ದಾರೆ. ಜಗದೊಡೆಯನಾದ ಹರಿಯು ನಮ್ಮ ಹಿರಿಯಜ್ಜನಾಗಿದ್ದು ಅವನಾಜ್ಞೆಯಂತೆ ಕುರಿಗಳಂತೆ ಐಕ್ಯತೆಯಿಂದ ಜೀವಿಸಬೇಕು. ಪಕ್ಷಪಾತ, ಜಾತೀಯತೆ ಹಾಗೂ ತಿರಸ್ಕಾರದಿಂದ ಜೀವಿಸಿದರೆ ಅದು ಭಗವಂತನಿಗೆ ಎಸಗುವ ಅಪಚಾರವೆಂದಿದ್ದಾರೆ ಕನಕದಾಸರು.

ಅಷ್ಟ ಮದಗಳಾದ ಧನ, ರೂಪ, ಯೌವನ, ಕುಲ, ಬಲ, ರಾಜ್ಯ, ತಪ ಎಲ್ಲವೂ ಮನುಷ್ಯನನ್ನು ಆಕ್ರಮಿಸಿವೆ. ಮದಿಸಿದ ಟಗರುಗಳಂತೆ ಕಂಡ ಕಂಡವರನ್ನು ಹಿಂಸಿಸಲು ಕಾರಣವಾಗಿವೆ. ಅಂಥ ದುರುಳರ ಮದವಿಳಿಸಲು ಹರಿಯು ತನ್ನ ನಿಯಂತ್ರಣದ ಕೋಲಿಗೆ ಮದಾಂಧರನ್ನು ಕಟ್ಟಿ ತನ್ನಿಷ್ಟದಂತೆ ಆಡಿಸುತ್ತಾನೆ. ಜಾತಿಯ ಜಂಬ ಕೊಚ್ಚಿಕೊಂಡು ಶೂದ್ರರನ್ನು ನಿರಂತರ ಶೋಷಣೆಗೊಳಪಡಿಸುವ ವೈದಿಕರು ಇದನ್ನು ಅರಿತು ನಡೆದು ಹರಿಯ ಕಠಿಣ ಶಿಕ್ಷೆಯಿಂದ ಉಳಿದುಕೊಳ್ಳಲು ಕಿವಿ ಮಾತು ಹೇಳಿದ್ದಾರೆ:

ಅಷ್ಟಮದ ಮತ್ಸರಗಳೆಂತೆಂಬ ಟಗರುಗಳು
ದೃಷ್ಟಿ ಜೀವಾತ್ಮನೆಂತೆಂಬ ಆಡು
ಸೃಷ್ಟಿ ಸಿದ್ಧ ಪ್ರಸಿದ್ಧವೆಂತೆಂಬ ಹೋತಗಳು
ಕಟ್ಟಿ ಕೋಲಿನಲಿ ಇರಿಯುತಿಹ ನಮ್ಮಜ್ಜ

ವೇದಶಾಸ್ತ್ರ ಪುರಾಣವೆಂತೆಂಬ ಶ್ವಾನಗಳು
ಕಾದಿದ್ದು ನಮ್ಮಜ್ಜನ ಹಿಂಡೊಳಗೆ
ಹಾದಿ ಕಾಣದೆ ಕೂಗಿ ಬಾಯಾರಿ ಕಾಲ್ಗೆಡಲು
ಆದರಿಸಿ ಅಂಬಲಿಯನೆರೆವ ನಮ್ಮಜ್ಜ[10]

ಕನಕದಾಸರಲ್ಲಿಯ ಬಂಡಾಯದ ವೈಚಾರಿಕ ಮನೋಭಾವನೆಗಳನ್ನು ತಿಳಿಯಬೇಕಾದರೆ ಅತೀ ಸೂಕ್ಷ್ಮವಾಗಿ ವಿವೇಚಿಸಬೇಕಾಗುತ್ತದೆ. ಮೇಲಿನ ಕೀರ್ತನೆಯ ಸಾಲುಗಳಲ್ಲಿ ಹೇಳಿರುವಂತೆ ಅಜ್ಜನೆಂದರೆ ಹರಿ. ಜಗತ್ತಿನಾದ್ಯಂತ ಮನುಷ್ಯರೆಲ್ಲರೂ ಆತನಿಂದಲೇ ಸೃಷ್ಟಿಸಲ್ಪಟ್ಟಿದ್ದಾರೆ. ಕುರಿಗಳು ಅಜ್ಞಾನದ ಸಂಕೇತವಾದರೆ ಹರಿಯು ಜ್ಞಾನಿಯಾಗಿದ್ದಾನೆ. ಆತನು ಮನುಷ್ಯರನ್ನು ಮೇಲು–ಕೀಳುಗಳ ಅಳತೆಗೋಲಿನಿಂದ ಅಳೆದು ಸಂರಕ್ಷಿಸುತ್ತಿಲ್ಲ. ಬಡವನಾಗಿರಲಿ ಬಲ್ಲಿದನಾಗಿರಲಿ ದಲಿತರಾಗಿರಲಿ ಬ್ರಾಹ್ಮಣನಾಗಿರಲಿ, ಪಂಡಿತರಾಗಿರಲಿ ಪಾಮರನಾಗಿರಲಿ, ಭೇದ ಭಾವ ಎಣಿಸದೆ ಸಕಲರನ್ನೂ ಒಂದೇ ದೃಷ್ಟಿಯಿಂದ

ಕಾಣುತ್ತಿರುತ್ತಾನೆ. ಹೀಗಿರುವಾಗ ಬ್ರಾಹ್ಮಣರು ಜಾತಿಯತೆಯಿಂದ ಕೆಳವರ್ಗದವರನ್ನು ಹಿಂಸಿಸುವುದು ಸರಿಯೆ? ಇದಕ್ಕೆ ಕೊನೆಯೂ ಇಲ್ಲವೆ? ಜಗದ್ರಕ್ಷಕನಾದ ಹರಿಯು ಇದನ್ನು ಒಪ್ಪುವನೆ? ಎಂಬ ನೂರಾರು ಪ್ರಶ್ನೆಗಳನ್ನು ಬ್ರಾಹ್ಮಣೋತ್ತಮರಿಗೆ ಅವರನ್ನು ಜಾತೀಯತೆಯ ಜಡಮನಸ್ಸಿನಿಂದ ಮುಕ್ತಗೊಳಿಸಲು ಪ್ರಯತ್ನಿಸಿದ್ದಾರೆ.

ಮನುಷ್ಯನ ಹುಟ್ಟು ಸಾವುಗಳೆರಡೂ ಭಗವಂತನ ಆಜ್ಞಾನುಸಾರವೇ ನಡೆಯುತ್ತವೆ. ಹುಟ್ಟಿದ ಮನುಷ್ಯನು ಸಾಯಲೇಬೇಕು. ಹುಟ್ಟುವ ಮನುಷ್ಯ ಮಾತೃಗರ್ಭದಿಂದ ಹೊರಬರುವಾಗ ಮೊದಲು ಬ್ರಾಹ್ಮಣ ಅನಂತರ ದಲಿತ, ಸಾಯುವಾಗ ದಲಿತ ಮೊದಲು ನಂತರ ಬ್ರಾಹ್ಮಣ ಎಂದು ನಿರ್ಧರಿಸಿರುವುದಿಲ್ಲ. ಹೀಗಿರುವಾಗ ಹುಟ್ಟಿ ಸಾಯುವ ಮನುಷ್ಯನಲ್ಲಿ ವರ್ಗ–ವರ್ಣದ ತಾರತಮ್ಯವೇಕೆ? ಎಂದು ಮೇಲ್ವರ್ಗದವರನ್ನು ಕನಕದಾಸರು ಪ್ರಶ್ನಿಸುತ್ತಾರೆ. ಮೇಲ್ವರ್ಗದವರಿಗೂ ಸಾವು ಇದೆ ಎಂಬುದನ್ನು ಹೀಗೆ ಅರುಹಿದ್ದಾರೆ:

ಹುಟ್ಟುದಕೆ ಮೊದಲಿಲ್ಲ ಸಾವುದಕೆ ಕೊನೆಯಿಲ್ಲ
ಹುಟ್ಟು ಸಾವಿನ ಹೊಲಬ ಬಲ್ಲ ನಮ್ಮಜ್ಜ
ಅಷ್ಟು ಪ್ರಾಣಿಗಳಿಗೆ ಇಷ್ಟು ಅಂಬಲಿ ಮಾಡಿ
ಹೊಟ್ಟೆ ತುಂಬುವ ಹಾಗೆ ಎರೆವ ನಮ್ಮಜ್ಜ[11]

ಅಣು, ರೇಣು, ತೃಣ, ಕಾಷ್ಟಗಳಲ್ಲಿ ಭಗವಂತನಿದ್ದಾನೆ. ಕೋಟ್ಯಾನು ಕೋಟಿ ಜೀವರಾಶಿಗಳಿಗೆ ಅವನೇ ಆಹಾರವೀಯುತ್ತಾನೆ. ನರಮನುಷ್ಯರಾದ ಎಲ್ಲ ವರ್ಗದವರಿಗೂ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿದ್ದಾನೆ. ಆತನ ಆಶ್ರಯದಲ್ಲಿ ಬೆಳೆಯುತ್ತಿರುವ ಮನುಷ್ಯರೆಲ್ಲರೂ ಒಂದಾಗಿ ಬಾಳಬೇಕು ಎಂಬುದು ಕನಕದಾಸರ ಸಾಮಾಜಿಕ ಹಿತ ಚಿಂತನೆ. ಆದರೆ ಬ್ರಾಹ್ಮಣರಿಗೆ ಇವು ಹಿಡಿಸದಾದವು. ಕನಕದಾಸ ತಾನು ಕುರುಬನಾಗಿ ಬ್ರಾಹ್ಮಣರಾದ ನಮ್ಮೊಂದಿಗೆ ಬೆರೆತು ಇರುವುದೆಂದರೆ ವೈದಿಕ ಧರ್ಮಕ್ಕೆ ಅಪಚಾರವೆಂದು ದೂರಿದರು.

ಕನಕದಾಸರು ಕಾಗಿನೆಲೆಯಾದಿಕೇಶವನ ಆರಾಧನೆಯಲ್ಲಿ ತೊಡಗಿ ಆತನ ಸಾಕ್ಷಾತ್ಕಾರಕ್ಕಾಗಿ ಹಗಲಿರುಳು ಭಜಿಸಿದರು. ಹರಿಯ ನಾಮಸ್ಮರಣೆ ಹಾಗೂ ಅವರ ಆಧ್ಯಾತ್ಮಿಕ ಚಿಂತನೆಗಳಿಂದ ಹರಿದಾಸರೆಂದು ಅವರ ಸಾಹಿತ್ಯದಲ್ಲಿ ಕಂಡುಬರುತ್ತದೆ. ಹರಿದಾಸರೆಂದ ಮೇಲೆ ಸರ್ವಸಂಗ ಪರಿತ್ಯಾಗ ಮಾಡಿ ಹರಿಯ ಧ್ಯಾನದಲ್ಲೇ ಲೀನರಾದವರು. ಹರಿಯ ನಿಜ ಸ್ವರೂಪವನ್ನು ಕಾಣುವ ತವಕದಿಂದ ವಿವಿಧ ಪುಣ್ಯ ಕ್ಷೇತ್ರಗಳನ್ನು ಅಲೆದಾಡಿದರು. ಪವಿತ್ರ ನದಿಗಳಲ್ಲೂ ಪುಣ್ಯಸ್ನಾನ ಮಾಡಿದರು. ಅಪಾರವಾದ ಜ್ಞಾನಸಂಪಾದನೆ, ಹಾಗೂ ಆಧ್ಯಾತ್ಮಿಕ ಅನುಭವ ಹೊಂದಿದರು. ತ್ರಿಕಾಲ ಜ್ಞಾನ ಹೊಂದಿದ್ದರಿಂದ ಜಗದ ಜಟಿಲ ಸಮಸ್ಯೆಗಳನ್ನು ಬಗೆಹರಿಸುವ ಪ್ರಯತ್ನ ಮಾಡಿದರು. ಅಪಾರ ಜ್ಞಾನ ಸಂಪಾದನೆ ಹೊಂದಿದ್ದರೂ ಕನಕದಾಸರು ಸ್ವಲ್ಪವೂ ಅಹಂಭಾವನೆ ಹೊಂದಿರಲಿಲ್ಲ. ಅವರು ಎಲ್ಲ ಹಿರಿ–ಕಿರಿಯರಲ್ಲೂ ಬೆರೆತು ಎಲ್ಲೂರನ್ನು ಗೌರವಿಸುತ್ತಿದ್ದರು.

ಕನಕದಾಸರ ಆದರ್ಶಗುಣಗಳು ಮೇಲ್ವರ್ಗದವರಿಗೆ ಅಪಥ್ಯವಾದವು. ಜೊತೆಗೆ ಕನಕದಾಸರ ಕಟು ವಾಕ್ಯಗಳೂ ಸಮಾಜಘಾತುಕ ಮೇಲ್ವರ್ಗದವರನ್ನು ಚುಚ್ಚದೇ ಇರಲಿಲ್ಲ.

ದಾಸನೆಂದರೆ ಸರ್ವಸಂಗ ಪರಿತ್ಯಾಗಿ ಎಂದರ್ಥ. ಕನಕದಾಸರಿಗೆ ಹರಿಯ ದಾಸತ್ವ ದೊರೆತದ್ದು ಜಾತಿಯಿಂದಲ್ಲ. ಅವರ ಜ್ಞಾನ ಬಲದಿಂದ ಹರಿದಾಸರಾದರೆಂಬುದಕ್ಕೆ ಅವರ ಕೀರ್ತನೆಗಳೇ ನಿದರ್ಶನ. ಅವರು ಹರಿದಾಸರಾದರೂ ಗರ್ವದಿಂದ ಮೆರೆಯಲಿಲ್ಲ. ಬದಲಾಗಿ ದಾಸರ ಮನೆಯಲ್ಲಿ ದಾಸರಾಗಿ ಸೇವೆ ಸಲ್ಲಿಸುವ ದಾಸಿಯ ಮಗ ನಾನು ಎನ್ನಬೇಕಾದರೆ ತಮ್ಮನ್ನು ಕುರಿತು ಯಾವ ಮಟ್ಟದಲ್ಲಿ ಹರಿದಾಸನಾಗಬಯಸಿರಬಹುದೆಂದು ಊಹಿಸಲು ಅಸಾಧ್ಯ.

ದಾಸ ದಾಸರ ಮನೆಯ ದಾಸಿಯರ ಮಗನಾನು
ಸಾಸಿರ ನಾಮದೊಡೆಯ ರಂಗಯ್ಯನ ಮನೆಯ[12]

ಈ ಕೀರ್ತನೆಯ ಆರಂಭಿಕ ಸಾಲುಗಳಲ್ಲಿ ತಿಳಿದುಕೊಳ್ಳಬೇಕಾದ ವಿಷಯವೆಂದರೆ ಜಗದೊಡೆಯನಾದ ಶ್ರೀರಂಗನ ದಾಸರು ಎಷ್ಟು ಜನರಿರುವರೋ ಅವರೊಂದಿಗೆ ಬೆರೆತು ಜ್ಞಾನ ಸಂಪಾದಿಸಿಕೊಳ್ಳುವ ಅವಕಾಶಕ್ಕಾಗಿ ಹಾತೊರೆಯುವ ಪರಿ ಎದ್ದು ಕಾಣುತ್ತದೆ. ಜೊತೆಗೆ ದಾಸರ ಅಡಿದಾಸನಾಗಿ ಸೇವೆ ಸಲ್ಲಿಸಿ ಹಿರಿಯರ ಪ್ರೀತಿಗೆ ಪಾತ್ರನಾಗುವ ಆಶಯವನ್ನೂ ಕನಕದಾಸರು ಹೊಂದಿದ್ದರು.

ಕನಕದಾಸರು ಸ್ವಾರ್ಥಕ್ಕಾಗಿ ಹರಿಯನ್ನು ಬಳಸಿಕೊಳ್ಳುವ ಬ್ರಾಹ್ಮಣೋತ್ತಮರನ್ನು ಒಪ್ಪಿಕೊಳ್ಳಲಾರರು. ನೈಜ ಹರಿಭಕ್ತಿಯುಳ್ಳವನಿಗೆ ದಾಸತ್ವ ದೊರಕುವುದೇ ಹೊರತು, ಸ್ವಾರ್ಥ ಸಾಧನೆಗಾಗಿ ಪೊಳ್ಳು ಭಕ್ತಿಯ ಡಾಂಬಿಕರಿಗಲ್ಲ. ದಾಸನಾದವ ದಾಸರ ಮನೆಯ ದಾಸನಾಗಿ ದುಡಿದಾಗ ದಾಸನಾಗಲು ಸಾಧ್ಯವೆಂದಿದ್ದಾರೆ.

ಕನಕದಾಸರು ಯಾವ ದಾಸರ ಮನೆಯ ಅಡಿದಾಸನಾಗಿರಲು ಇಚ್ಛಿಸಿದರೆಂದರೆ ಹರಿನಾಮ ಶಂಖನಾದಗೊಳಿಸುತ್ತ ಮುಕ್ತಿಯ ಮಾರ್ಗ ಕಂಡುಕೊಳ್ಳಲು ಹೊರಟ ದಾಸರ ಮನೆಯಲ್ಲಿ ಜ್ಞಾನಹೀನ ದಾಸನಾಗಿ ಸೇವೆಸಲ್ಲಿಸುತ್ತ ಅವರಿಂದ ಹರಿದಾಸ ಜ್ಞಾನ ಪಡೆಯಲು ಕನಕದಾಸರು ಹರಿದಾಸರಾಗಿ ಹರಿಯ ಹುಚ್ಚು ಹಿಡಿಸಿಕೊಂಡು ಬೀದಿ-ಬೀದಿಯಲ್ಲಿ ಅಲೆದು ಆತನನ್ನು ಕಂಡು ಪುನೀತರಾಗಲು ಹಾತೊರೆಯುತ್ತಾರೆ. ಯಾರು ಹರಿಯ ಮಹಿಮೆಯನ್ನು ಹೊಗಳುವರೋ ಅವರ ದಾಸನಾಗಬಯಸುತ್ತಾರೆ. ಎಲ್ಲಿ ಪುರಾಣಾದಿಗಳಲ್ಲಿ ಹರಿಯನ್ನು ಹೊಗಳಿ ಆತನ ಮಹಿಮೆ ಕುರಿತು ಬೋಧಿಸುವರೋ ಅಂಥ ಹರಿದಾಸರ ಮನೆಯ ಕಾಯ್ದು ಸೇವೆ ಸಲ್ಲಿಸುವ ಬಡದಾಸನಾಗಬೇಕೆಂದಿದ್ದಾರೆ ಕನಕದಾಸರು.

ಶಂಕುದಾಸರ ಮನೆಯ ಮಂಕುದಾಸನು ನಾನು
ಮಂಕುದಾಸನು ನಾನು ಮರುಳದಾಸ[13]

ಸಂಕೀರ್ತನೆಯ ಮಾಡಿ ನೆನೆವ ಭಕ್ತರ ಮನೆಯ
ಬಿಂಕದಿ ಬಾಗಿಲ ಕಾಯ್ವ ಬಡದಾಸ ನಾನಯ್ಯ

ಹಲವು ದಾಸರಮನೆಯ ಹೊಲೆಯ ದಾಸನು ನಾನು
ಕುಲವಿಲ್ಲದ ದಾಸ ಕುರುಬ ದಾಸ
ಛಲದಿ ನಿನ್ನ ಭಜಿಪರ ಮನೆಯ ಮಾದಿಗ ದಾಸ[14]

ಎಂದು ಸಂಬೋಧಿಸುವ ಕನಕದಾಸರು ಸಮಾಜದಿಂದ ಬಹಿಷ್ಕರಿಸಲ್ಪಟ್ಟ ದಲಿತರ ಪರ ವಾದಿಸುತ್ತ ಸ್ವತಃ ಅವರ ದಾಸನಾಗಿ ಸೇವೆ ಮಾಡುವ ಸದಾಶಯ ವ್ಯಕ್ತಪಡಿಸಿದ್ದಾರೆ. ಕೀಳರಿಮೆಯಿಂದ ದಲಿತರನ್ನು ಬಹಿಷ್ಕರಿಸಿದ್ದ ಉನ್ನತ ಕುಲದವರ ವರ್ತನೆಯನ್ನು ವಿರೋಧಿಸಿ ದಲಿತರನ್ನು ಮೇಲೆತ್ತಲು ಪ್ರಯತ್ನ ಮಾಡಿದ್ದಾರೆ. ದಲಿತ ವರ್ಗದವರನ್ನು ಪ್ರೀತಿಸಿ ಗೌರವಿಸಿ ಅವರನ್ನೂ ಮನಷ್ಯರಂತೆ ಕಂಡು ಅವರ ಸೇವೆ ಮಾಡುವ ದಾಸರಾಗಿರಿ ಎಂದು ಪಂಡಿತರಿಗೆ ಕರೆಕೊಟ್ಟಿದ್ದಾರೆ. ಕನಕದಾಸರ ಈ ಮಾತುಗಳು ಇಂದಿನ ಸಮಾಜದಲ್ಲಿಯ ಮತಾಂಧರಿಗೆ ಹೇಳಿದ ಹಿತೋಪದೇಶಗಳಾಗಿವೆ. ಹೀನಾಯ ಸ್ಥಿತಿಯಲ್ಲಿದ್ದ ದಲಿತರ ಸೇವೆಯನ್ನು ದಾಸನಾದವನು ಮಾಡುವುದಾದರೆ ಅದು ಹರಿಯ ಸೇವೆಗಿಂತಲೂ ಮಿಗಿಲಾದುದು. ಅಂಥ ಸೇವೆ ಮೇಲ್ವರ್ಗದವರಿಂದಾಗುವುದಾದರೆ ಅವರೂ ಹರಿದಾಸರಾಗಿ ಹರಿಗೆ ಹತ್ತಿರವಾಗುತ್ತಾರೆ ಎಂಬುದು ಕನಕರ ನಿಲುವು.

ಕನಕದಾಸರು ಉಡುಪಿ ಕೃಷ್ಣನ ದರ್ಶನಕ್ಕೆಂದು ಉಡುಪಿಗೆ ಬಂದರು. ಏಕಮೇವರಾಗಿ ದೇವಸ್ಥಾನದ ಪ್ರವೇಶಕ್ಕೆ ಮುಂದಾಗುತ್ತಾರೆ. ಕೃಷ್ಣನ ದರ್ಶನದ ಸದಾಶಯ ಹೊಂದಿ ಗುಡಿಯ ಬಾಗಿಲಿನಲ್ಲಿ ನಿಂತು ಕೃಷ್ಣನ ಜಪ ಮಾಡುತ್ತ ಭಕ್ತಿ ಪೂರ್ವಕವಾಗಿ ಭಜನೆಯಲ್ಲಿ ತೊಡಗುತ್ತಾರೆ. ಕನದಾಸರು ಉಡುಪಿಗೆ ಬಂದಿರುವ ಹಾಗೂ ಜನರಲ್ಲಿ ವಿಶ್ವಾಸಗಳಿಸಿ ಕೀರ್ತನೆಗಳ ಮುಖಾಂತರ ಜನರ ಮನಸ್ಸಿನಲ್ಲಿ ಮನೆ ಮಾಡಿದ್ದ ಮೌಢ್ಯತೆಯನ್ನು ಹೊಡೆದೋಡಿಸುವ ಕಾರ್ಯದಲ್ಲಿ ತೊಡಗಿರುವ ವಿಷಯವನ್ನು ಬ್ರಾಹ್ಮಣರು ಮೊದಲೇ ಅರಿತವರಾಗಿದ್ದರಿಂದ ಕನಕದಾಸರನ್ನು ಕುರುಬನೆಂದು ಗೊತ್ತು ಹಚ್ಚಲು ಅವರು ಬಹಳ ಶ್ರಮ ಪಡಬೇಕಾಗಲಿಲ್ಲ. ಹರಿನಾಮ ಸ್ಮರಣೆಯೊಂದಿಗೆ ಹಿಂಬಾಲಕರನ್ನು ಒಟ್ಟು ಗೂಡಿಸಿಕೊಂಡು ಉಡುಪಿಯ ಕೃಷ್ಣನ ಗುಡಿಯತ್ತ ಬರುವುದನ್ನು ಬ್ರಾಹ್ಮಣರು ಕೆಂಗಣ್ಣಿನಿಂದ ನೋಡಿದರು. ಕನಕದಾಸರನ್ನು ಗುಡಿಯ ಒಳಗಡೆ ಪ್ರವೇಶಿಸದಂತೆ ತಡೆದರು. ನಾನು ಹರಿದಾಸ. ಕೃಷ್ಣನನ್ನು ನೋಡುವ ಆತುರದೊಂದಿಗೆ ಬಂದಿದ್ದೇನೆ. ಭಕ್ತಿಯಿಂದ ಕೃಷ್ಣನನ್ನು ಪೂಜಿಸಿ ಭಜಿಸುವ ಹಕ್ಕು ನನಗೂ ಇದೆ. ನನ್ನನ್ನೇಕೆ ತಡೆಯುವಿರಿ? ನನ್ನನ್ನು ಒಳಗೆ ಹೋಗಲು ಬಿಡಿ. ಕೃಷ್ಣನ ಗುಡಿಯ ದ್ವಾರವು ಎಲ್ಲರಿಗೂ ಮುಕ್ತವಾದದ್ದು. ಎಲ್ಲ ಜಾತಿಯ ಜನರೂ ಒಳಗೆ ಪ್ರವೇಶಿಸಿ ಆತನನ್ನು ಪೂಜಿಸಬಹುದು. ಆತನು ಬರೀ ಬ್ರಾಹ್ಮಣರಿಗೆ ಮೀಸಲಾದವನೆ? ಎಂದು ಪ್ರಶ್ನಿಸಿ ಬ್ರಾಹ್ಮಣ ಅರ್ಚಕರನ್ನು ಕನಕದಾಸರು ಪರಿ-ಪರಿಯಾಗಿ ಬೇಡಿಕೊಂಡರೂ ಒಳಗೆ ಪ್ರವೇಶಿಸದಂತೆ ತಡೆದ ಅರ್ಚಕರ ವರ್ತನೆಯನ್ನು ಖಂಡಿಸಿದರು.

ಕೃಷ್ಣನು ಇಲ್ಲಿ ಇರುವುದೇ ನಿಜವಾಗಿದ್ದರೆ ನನಗೂ ದರ್ಶನ ಭಾಗ್ಯ ಕೊಡಲಿ, ಇಲ್ಲವೆ ನಾನಿರುವಲ್ಲಿಗೇ ಬಂದು ದರ್ಶನ ಕೊಡಲಿ ಎಂದು ಬ್ರಾಹ್ಮಣರೊಂದಿಗೆ ವಾದಕ್ಕಿಳಿದು, ಕೃಷ್ಣನ ಗುಡಿಯನ್ನು ಬಲವಂತದಿಂದ ಪ್ರವೇಶಿಸಲು ಪ್ರಯತ್ನ ಮಾಡುತ್ತಾರಾದರು ಅದು ಫಲಿಸದಾದಾಗ ಗುಡಿಯ ಮುಂದೆ ಕೃಷ್ಣನೊಂದಿಗೆ ಸಂವಾದಕ್ಕಿಳಿಯುತ್ತಾರೆ. ನಾನಿನ್ನ ದಾಸನಾಗಿದ್ದು ಸರ್ವ ಸಂಗ ಪರಿತ್ಯಾಗಿಯಾಗಿ ಬಂದು ನಿನ್ನ ದರ್ಶನದ ಹಂಬಲದಲ್ಲಿ ನಿನ್ನ ಗುಡಿಯ ಬಾಗಿಲಲ್ಲಿ ನಿಂತಿದ್ದೇನೆ. ನನ್ನ ಕೂಗು ನಿನಗೆ ಕೇಳಿಸುತ್ತಿಲ್ಲವೆ? ಢಾಂಬಿಕತನದ ಪೂಜೆಯೊಂದಿಗೆ ನಿನ್ನನ್ನು ಬಂಧನದಲ್ಲಿರಿಸಿ ನಿನ್ನ ದರ್ಶನ ಭಾಗ್ಯವನ್ನು ಕಸಿದುಕೊಂಡು ಅಪಚಾರವೆಸಗುವ ಈ ಅರ್ಚಕರಷ್ಟೇ ನಿನ್ನ ಭಕ್ತರೆ? ದಲಿತ-ಶೂದ್ರರಿಗೆ ದರ್ಶನ ಭಾಗ್ಯ ನೀಡದಿರುವುದು ತರವೆ? ಎಂದು ಕನಕದಾಸರು ಕೃಷ್ಣನನ್ನು ಪ್ರಶ್ನಿಸುತ್ತ ಗುಡಿಯ ಹೊರಗೆ ನಿಂತು ಕೃಷ್ಣನನ್ನು ಪ್ರಶ್ನಿಸುತ್ತಿದ್ದಾರೆ. ಕನಕದಾಸರನ್ನು ಅಲ್ಲಿಂದ ಕಾಲ್ತೆಗೆಯುವಂತೆ ಅರ್ಚಕರು ಆದೇಶಿಸಿದ್ದಾರೆ. ಹತಮಾರಿಯಾದ ಕನಕದಾಸರು ತಮ್ಮ ನ್ಯಾಯ ಸಮ್ಮತ ದರ್ಶನ ಭಾಗ್ಯಕ್ಕಾಗಿ ಚಡಪಡಿಸುತ್ತಾರೆ. ಅರ್ಚಕರು ಕನಕದಾಸರು ಗುಡಿಯ ಒಳಗಡೆ ಹೋದರೆ ಗುಡಿಯೇ ಅಪವಿತ್ರವಾಗಿ ಶ್ರೀಕೃಷ್ಣನೂ ಅಪವಿತ್ರನಾಗುತ್ತಾನೆ ಎಂಬ ದುರಾಲೋಚನೆಯಿಂದ ಕನಕದಾಸರನ್ನು ಹಿಗ್ಗಾ-ಮುಗ್ಗಾಬಡಿದು ಹೊರಗೆ ಅಟ್ಟಿದಾಗ ಕನಕದಾಸರು ಅಸಹಾಯಕರಾಗಿ ಮನನೊಂದು ಅಲ್ಲಿಂದ ಕಾಲ್ತೆಗೆಯುತ್ತಾರೆ. ನನಗೆ ಕೃಷ್ಣನ ದರ್ಶನ ಭಾಗ್ಯ ಸಿಗದಿರುವ ಕಾರಣವೇನೆಂದು ಆಳವಾಗಿ ವಿಚಾರಿಸುತ್ತಾರೆ. ಆ ನಾಡಿನಿಂದ ಈ ನಾಡಿನಲ್ಲಿರುವ ಕೃಷ್ಣನ ದರ್ಶನಕ್ಕಾಗಿ ನಾನು ಬಂದಿರುವೆನಾದರೂ ಇಲ್ಲಿ ಮಡಿವಂತರು ತಡೆಯುತ್ತಿರುವುದು ಯಾವ ನ್ಯಾಯ? ಶೂದ್ರನಾದ ಮಾತ್ರಕ್ಕೆ ಕೃಷ್ಣನನ್ನು ನೋಡುವುದು ಅಪರಾಧವೆ? ಪರಮಾತ್ಮನಾದ ಕೃಷ್ಣನೇ ನಮ್ಮನ್ನೆಲ್ಲ ಸೃಷ್ಟಿಸಿದ್ದಾನೆ. ಆತನಿಗೇ ಕುಲ-ಗೋತ್ರ ಯಾವುದರ ಪರವೂ ಇಲ್ಲ ಅಂಥ ಕೃಷ್ಣನ ದರ್ಶನಕ್ಕೆ ದಲಿತರು ಅರ್ಹರಲ್ಲವೆಂದರೆ ಹೇಗೆ? ಎಂದು ಚಿಂತಿಸಿ ದೈನ್ಯತೆಯಿಂದ ಬೇಡುತ್ತಾ ಹೇಳಿದ್ದು ಹೀಗೆ:

ಪೂರ್ವ ಜನ್ಮದಲಿ ನಾ ಮಾಡಿದ ಕರ್ಮದಿಂ
ಉರ್ವಿಯೊಳು ಜನಿಸಿದೆನೊ ಕೃಷ್ಣ
ಕಾರುಣ್ಯನಿಧಿ ಎನ್ನ ಕಾಯಬೇಕಯ್ಯ ಹರಿ
ವಾರಿಜನಾಭನೆ ಮುದ್ದು ಕೃಷ್ಣ[15]

ಶೂದ್ರ ಕುರುಬನನ್ನಾಗಿ ಈ ಭುವಿಯಲ್ಲಿ ಹುಟ್ಟಿಸಿದವನು ನೀನೇ ಎಂದು ಕೃಷ್ಣನೊಂದಿಗೆ ವಾದಿಸುತ್ತ ಗುಡಿಯ ಮುಂದೆ ನಿಂತು ಹಾಡುತ್ತಿದ್ದಾರೆ. ಆ ಜನ್ಮ ಈ ಜನ್ಮಗಳನೆಲ್ಲ ನಿನ್ನ ಕರುಣೆಯಿಂದಲೇ ಪಡೆದಿರುವೆ. ನಿನ್ನ ದಾಸನಾಗಿ ನಿನ್ನನ್ನೇ ಕಾಣುವ ಭಾಗ್ಯ ನನಗೆ ಕರುಣಿಸದೇ ಇರುವುದು ತರವೆ? ಮಡಿವಂತರ ಬಂಧನದಲ್ಲಿರುವುದು ನಿನ್ನದಾವ ನ್ಯಾಯ? ನನ್ನ ಅಪರಾಧಗಳನ್ನು ಕ್ಷಮಿಸಿ ದರುಶನ ನೀಡಿ ನನ್ನನ್ನು ಕಾಯಬೇಕೆಂದು ಕೃಷ್ಣನಲ್ಲಿ ಕನಕದಾಸರು ಮೊರೆ ಹೋಗಿದ್ದಾರೆ.

ಈ ಭುವಿಯಲ್ಲಿ ಹುಟ್ಟಿದಂದಿನಿಂದಲೂ ಸುಖವೆಂದ್ದರೇನೆಂಬುದನು ನಾನರಿಯದಾದೆ. ಕುಲದ ಸೆಳುವಿಗೆ ಸಿಲುಕಿ ನಲುಗಿ ಹೋಗಿರುವೆ. ಮಡಿವಂತರ ಉಪಟಳದಿ ನಾ ಬೆಂದು ಹೊಗಿರುವೆ. ಶೂದ್ರ ಕುರುಬ, ದಲಿತ, ಇತ್ಯಾದಿ ಜಾತಿಯ ನಾಮಗಳಿಂದ ನಾ ರೋಸಿ ಹೋಗಿರುವೆ. ಇಷ್ಟೆಲ್ಲ ಕಷ್ಟ –ಕಾರ್ಪಣ್ಯಗಳ ಮಧ್ಯೆ ನಿನ್ನ ದಾಸನಾಗಿ ನಿನ್ನ ನಾಮಸ್ಮರಣೆಯ ಬಲದಿಂದ ಜೀವಿಸುತ್ತ ಮುನ್ನಡೆದೆ. ನಿನ್ನ ದರುಶನ ಕೋರಿ ನಿನ್ನೆಡೆಗೆ ಬಂದಿರುವೆ. ತೊಟ್ಟಿಲ ಶಿಶು ತಾಯಿಯ ಕಡೆ ನೋಡಿ ಬಾಯ್ಬಿಟ್ಟಂತೆ ಕಂಗೆಟ್ಟು ನಿಂತಿರುವೆ. ನಿನ್ನ ಅಡಿದಾವರೆಗಳನ್ನು ಚುಂಬಿಸಿ ಪುನಿತನಾಗುವ ಕನಸು ಕಟ್ಟಿ ನಿನ್ನ ಸನ್ನಿಧಿಗೆ ಬಂದ ನನ್ನನ್ನು ಕಣ್ತೆರೆದು ನೋಡು. ನನ್ನ ಮೊರೆ ಆಲಿಸಿ ದರುಶನವ ನೀಡು ಎಂದು ಬೇಡುವುದು ಕನಕದಾಸರಲ್ಲಿಯ ಕೃಷ್ಣ ಭಕ್ತಿಯ ಅಪಾರತೆಯನ್ನು ಸೂಚಿಸುತ್ತದೆ.ಅಲ್ಲದೆ ದಾಸನಾದ ಕನಕರು ಕೃಷ್ಣನನ್ನು ತಮ್ಮ ದೇಹದ ಕಣ–ಕಣದಲ್ಲಿ ಸಮೀಕರಿಸಿಕೊಂಡಿದ್ದಾರೆ.

ಮನುಜ ಕುಲದಲ್ಲಿ ಹುಟ್ಟಿದ ನಾವೆಲ್ಲರೂ ಸೋದರರು. ದಲಿತನೆಂದ ಮಾತ್ರಕ್ಕೆ ಮನುಷ್ಯರಾದ ಬ್ರಾಹ್ಮಣರೇ ಮುಟ್ಟುತ್ತಿಲ್ಲ ನಮ್ಮನ್ನು ಅಪ್ಪಿಕೊಂಡು ಪ್ರೀತಿಸುತ್ತಿಲ್ಲ. ಶೂದ್ರರೆಂಬ ಕಾರಣವೊಡ್ಡಿ ಕಂಡ–ಕಂಡಲ್ಲಿ ನಮ್ಮನ್ನು ಬಡಿದು ಓಡಿಸುತಿಹರು. ಜ್ಞಾನಿಗಳೆನಿಸಿಕೊಂಡರೂ ಅಜ್ಞಾನಿಗಳಂತೆ ವರ್ತಿಸುವರು. ಹೃದಯ ಶ್ರೀಮಂತಿಕೆಯನ್ನೇ ಹೊಂದಿರದ ಮಡಿವಂತ ಬ್ರಾಹ್ಮಣರ ಆತ್ಮದಲ್ಲಿರುವ ಕಲ್ಮಶವನ್ನು ಕಳೆದು ನಿರ್ಮಲ ಹೃದಯಿಗಳನ್ನಾಗಿಸು. ಅವರ ಆತ್ಮದ ದಟ್ಟ ದಾರಿದ್ರ್ಯತನವನ್ನು ಕಳೆದು ಮಾನವತೆಯ ಮಾರ್ಗ ತೋರಿಸದಿದ್ದರೆ ನನ್ನ ದೂರು ನಿನ್ನಲ್ಲಿ ಎಂದಿಗೂ ಇರುತ್ತದೆ. ಎಂದು ಕನಕದಾಸರು ಕೃಷ್ಣನಿಗೆ ಸವಾಲು ಹಾಕುತ್ತಾರೆ. ಕನಕದಾಸಾರಲ್ಲಿಯ ಈ ಭಾವನೆ ಅಜ್ಞಾನವೆಂಬ ದಾರಿದ್ರ್ಯತೆಯಲ್ಲಿ ಬ್ರಾಹ್ಮಣರ ಮಾನಸಿಕ ಅಪಕ್ವತೆಯನ್ನು ಸೂಚಿಸುತ್ತಾ ಕನಕದಾಸರಲ್ಲಿಯ ಮನೋಜ್ಞ ಪರಿಪಕ್ವತೆಯನ್ನು ಬಿಂಬಿಸಿದೆ.

ಪುಟ್ಟಿದಂದಿನಾರಭ್ಯ ಸುಖವೆಂಬುವುದನರಿಯೆ
ಕಷ್ಟ ಪಟ್ಟೆನು ಕೇಳೋ ಕೃಷ್ಣ
ತೊಟ್ಟಿಲ ಶಿಶು ತಾಯ್ಗೆ ಬಾಯ್ಬಿಟ್ಟ ತೆರದಿ ಕಂ–
ಗೆಟ್ಟು ಶೋಕಿಪೆನೋ ಕೃಷ್ಣ
ಮುಟ್ಟಲಮ್ಮರು ಎನ್ನ ಬಂಧುಗಳು ಕಂಡರೆ
ಅಟ್ಟಿ ಬಡಿವುತಲಿಹರೂ ಕೃಷ್ಣ
ದಟ್ಟ ದಾರಿದ್ರ್ಯವನು ಪರಿಹರಿಸದಿದ್ದರೆ
ಮುಟ್ಟುವುದು ದೂರು ನಿನಗೆ ಕೃಷ್ಣ[16]

ಕನಕದಾಸರು ತಮ್ಮ ಪೂರ್ವಜನ್ಮದ ಪಾಪದ ಫಲವಾಗಿಯೇ ನಾನು ಶೂದ್ರ ಕುರುಬ ಜಾತಿಯವನಾಗಿ ಹುಟ್ಟಿದೆನೆ? ಎಂದು ಪ್ರಶ್ನಿಸಿಕೊಳ್ಳುತ್ತ ಕೃಷ್ಣನಲ್ಲಿ ತಮ್ಮ ಪಾಪ ಪರಿಹಾರಕ್ಕಾಗಿ ಕೋರಿಕೆಯನ್ನಿಡುವುದು ನಿಜಕ್ಕೂ ದಲಿತರ ಹೀನ ಸ್ಥಿತಿಯನ್ನು ಬಿಂಬಿಸುತ್ತದೆ. ಈ ಜಗತ್ತಿನಲ್ಲಿ ನನ್ನಂಥ ಪಾಪಿಗಳಿರುವುದನ್ನು ಕೇಳಿರುವೆಯಾ ಕೃಷ್ಣ; ನನ್ನ ಪೂರ್ವಜನ್ಮದ

ಪಾಪದ ಪೀಡೆಯನ್ನು ತೊಲಗಿಸು ನನಗೆ ಜೀವನದ ಸುಗಮ ಮಾರ್ಗ ತೋರಿಸಿ ವಿವೇಕಿಯನ್ನಾಗಿ ಮಾಡು. ನೀನು ಅನಾಥ ರಕ್ಷಕನಾಗಿರುವೆ. ನೀನು ಚಂದ್ರಮುಖಿ ದ್ರೌಪದಿಯ ಮಾನ ಕಾಯ್ದು ಅವಳಿಗೆ ಅಕ್ಷಯವಶನವನಿತ್ತು ಕಾಪಾಡಿದ ಕರುಣಾಳು. ಅನಾಥ ರಕ್ಷಕನಾದ ನೀನು ನಿನ್ನ ದಾಸನಿಗೆ ದರ್ಶನ ನೀಡಲಾರೆಯಾ? ನಿನ್ನ ಪ್ರತ್ಯಕ್ಷ ರೂಪವನ್ನು ತೋರಿಸಲು ಏಕೆ ಹೊರಗೆ ಬರುತ್ತಿಲ್ಲ? ಎಂದು ಹಲುಬಿ ಕನಕದಾಸರು ಕೃಷ್ಣನನ್ನು ಗುಡಿಯಿಂದ ಹೊರಗೆ ಬರುವಂತೆ ಕೇಳಿಕೊಳ್ಳುತ್ತಾರೆ.

ಲೋಕದೊಳು ಎನ್ನಂಥ ಪಾಪಿಗಳು ಉಂಟೆದು
ನೀ ಕೇಳಿ ಬಲ್ಲೆಯಾ ಕೃಷ್ಣ
ಸಾಕೇಳು ಎನಗೊಂದು ಗತಿಯ ತೋರಿಸಿ ಸದ್ವಿ
ವೇಕಿಯನು ಮಾಡಯ್ಯ ಕೃಷ್ಣ
ರಾಕೇಂದು ಮುಖಿ ದ್ರೌಪದಿಯ ಮಾನವನು ಕಾಯ್ದು
ಆಕೆಗಕ್ಷಯವಿತ್ತೆ ಕೃಷ್ಣ
ನಾಕಾಣುವಂದದಲಿ ಉಡುಪಿಯಾದಿಕೇಶವ
ಏಕೆ ದರುಶನವೀಯೆ ಕೃಷ್ಣ[17]

ಕನಕದಾಸರು ತಾವು ಮೇಲ್ಜಾತಿಯಲ್ಲಿ ಹುಟ್ಟಲಿಲ್ಲವೆಂದು ನೊಂದುಕೊಳ್ಳದೆ ಕೃಷ್ಣನ ಗುಡಿಯಲ್ಲಿ ಧೈರ್ಯದಿಂದ ಪ್ರವೇಶಿಸಲು ಪ್ರಯತ್ನ ಪಟ್ಟಿದ್ದು, ಇತರ ದಲಿತ ವರ್ಗದ ಜನರಲ್ಲಿ ಆತ್ಮ ಸ್ಥೈರ್ಯ ತುಂಬಿದುದಾಗಿದೆ. ಸಾಮಾಜದಲ್ಲಿಯ ದಲಿತರು ತಮ್ಮತನವನ್ನು ಕಂಡುಕೊಳ್ಳುವಂತೆ ಸೂಚಿಸಿ ಕ್ರಾಂತಿಕಾರಕ ನಿಲುವು ತಳೆದಿದ್ದಾರೆ.

ಸಂಪ್ರದಾಯದ ವಿರುದ್ಧ ಬಂಡೆಳುವುದೆಂದರೆ ಬೆಂಕಿಯೊಂದಿಗೆ ಸರಸವಾಡಿದಂತೆಯೇ ಸರಿ. ವೈಷ್ಣವರ ವಿರುದ್ಧ ಬಂಡೆಳುವ ಮುಖಾಂತರ ದಲಿತರಿಗೆ ನ್ಯಾಯ ದೊರಕಿಸಿ ಕೊಡಲು ಮುಂದಾಗಿ ಹಿಂಸೆಗೆ ಒಳಗಾದರೆಂದರೆ ಕನಕದಾಸರ ತ್ಯಾಗ ಮನೋಭಾವನೆ ಅವರ್ಣನೀಯವಾದುದು. ದುಷ್ಟ ಬ್ರಾಹ್ಮಣರಿಂದ ಹೊಡಿಸಿ-ಬಡಿಸಿಕೊಳ್ಳುವ ಮೂಲಕ ದೈಹಿಕ ಹಿಂಸೆಗೊಳಗಾದರು. ಕನಕದಾಸರ ಹೃದಯದಿಂದ ಚಿಮ್ಮಿದ ಕೀರ್ತನೆಯ ಮಾತುಗಳು ಹೃದಯವಿದ್ರಾವಕವಾದವುಗಳು. ಯಾವ ನಿರ್ದಯಿಯಾದರೂ ಈ ಕನಕರ ಕಹಿ ಘಟನೆಗಳಿಗೆ ಖೇದ ವ್ಯಕ್ತಪಡಿಸದೇ ಇರಲಾರ.

'ದಟ್ಟ ದಾರಿದ್ರ್ಯವನು ಪರಿಹರಿಸದಿದ್ದರೆ" ಎಂಬ ನುಡಿ ಎಳ್ಳಷ್ಟೂ ಕರುಣೆಯಿಲ್ಲದ ಬ್ರಾಹ್ಮಣರ ಆತ್ಮದ ದಟ್ಟ ದಾರಿದ್ರ್ಯ ಅಥವಾ ಅಜ್ಞಾನವನ್ನು ಹೋಗಲಾಡಿಸಿ ಅವರಿಗೂ ಸುಜ್ಞಾನವನ್ನು ಕೊಟ್ಟು ಮಾನವೀಯತೆ ಮೆರೆಸುವಂತೆ ಮಾಡು. ಸರ್ವರೊಡನೆ ಸಮಾನತೆಯಿಂದ ಬಾಳಿ ಮನುಷ್ಯ ಜನ್ಮದ ಸಾರ್ಥಕತೆಯ ಪ್ರಯತ್ನದತ್ತ ತೆರಳಲು ಪ್ರೇರೆಪಿಸು ಎನ್ನುವ ಮಾತು ಬ್ರಾಹ್ಮಣರನ್ನು ನಿಷ್ಕರುಣ ಭಾವನೆಯಿಂದ ಮುಕ್ತಗೊಳಿಸುವಂತೆ ಕೃಷ್ಣನಲ್ಲಿ ಮೊರೆ ಇಟ್ಟಿದ್ದಾರೆ.

ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ
ಕೂಗಿದರು ಧ್ವನಿ ಕೇಳಲಿಲ್ಲವೆ ನರಹರಿಯೆ[18]

ಎಂದು ಮಡಿವಂತರಿಗೆ ಸೀಮಿತವಾಗಿರುವ ಕೃಷ್ಣನನ್ನು ಎಬ್ಬಿಸಿ ಹೊರತರುವ ಪ್ರಯತ್ನ ಮಾಡಿದ್ದಾರೆ ಹಿರಣ್ಯಕಶ್ಯಪುವಿನ ಮಗ ಪ್ರಹ್ಲಾದನ ಭಕ್ತಿಗೆ ಮೆಚ್ಚಿ ಕಂಬದಿಂದೊಡಮೂಡಿದೆ. ಪಾಂಡವರ ಪತ್ನಿ ದ್ರೌಪದಿಯ ವಸ್ತ್ರಾಪಹರಣದ ಸಂದರ್ಭದಲ್ಲಿ ಅಕ್ಷಯ ವಸ್ತ್ರವನ್ನಿತ್ತು ಕಾಪಾಡಿದೆ. ಆದರೆ ನಿನ್ನನ್ನೇ ಆರಾಧಿಸುತ್ತ ಇಷ್ಟು ವರ್ಷಗಳ ಕಾಲ ಊರೂರು ಅಲೆದೆ. ನಿನ್ನ ದರ್ಶನ ನನಗೇಕೆ ಇಲ್ಲ. ದುರುಳ ಅರ್ಚಕರ ಬಂಧನದಲ್ಲಿ ಸಿಲುಕಿ ನಿನ್ನನ್ನು ನೀನೆ ವಂಚಿಸಿಕೊಳ್ಳುತ್ತಿರುವೆ. ಏಳು–ಎದ್ದೇಳು ಈ ದಾಸನ ಧ್ವನಿ ಕೇಳಿ ಹೊರಗೆ ಬಾ. ನಿನ್ನ ದರ್ಶನದೊಂದಿಗೆ ಸೇವಾ ಭಾಗ್ಯ ಕಲ್ಪಿಸು ಎಂದು ಕನಕದಾಸರು ಹಾಡಿ ಕೃಷ್ಣನನ್ನು ಹೊರಗೆ ಕರೆತರುವ ಸಾಹಸ ದೊಡ್ಡದು.

ಕಡು ಕೋಪದಿಂ ಖಳನು ಖಡುಗವನು ಪಿಡಿದು ನಿ
ನ್ನೊಡನೆಯನೆಲ್ಲಿಹನೆಂದು ಜಡಿದು ನುಡಿಯೆ
ದೃಢ ಭಕುತಿಯಲಿ ಶಿಶುವು ಬಿಡದೆ ನಿನ್ನನು ಭಜಿಸೆ
ಸಡಗರದಿ ಕಂಬದಿಂದೊಡೆದೆ ನರಹರಿಯೆ[19]

ಕನಕದಾಸರು ಕೃಷ್ಣನೊಂದಿಗೆ ನಡೆಸಿದ ಹಠವಾದಿತನಕ್ಕೆ ಈ ಕೀರ್ತನೆಯೇ ಸಾಕ್ಷಿಯಾಗಿದೆ. ಅಂದರೆ ಕನಕದಾಸರ ವೈಚಾರಿಕ ಹಿನ್ನೆಲೆಯಂತೆ ಯಾರು ಢಾಂಬಿಕತನದಲ್ಲಿ ಮುಳುಗಿ ಜನರನ್ನು ವಂಚಿಸುವ ಕಾರ್ಯದಲ್ಲಿ ತೊಡಗಿರುವರೋ ಅಂಥವರ ಪೂಜೆ ಕೃಷ್ಣನ ಸನ್ನಿಧಿಯನ್ನು ಮುಟ್ಟದು ಏಕಾಂತದಿಂದ ದೇಹ ದಂಡಿಸಿ ಶ್ರೀಹರಿಯ ಧ್ಯಾನ ಮಾಡುವವರಿಗೆ ಮುಂದೊಂದು ದಿನ ಹರಿಯ ಪ್ರತ್ಯಕ್ಷದರ್ಶನವಾಗುತ್ತದೆ. ಈ ರೀತಿ ಭಕ್ತರಿಗೆ ಭರವಸೆ ಮೂಡಿಸಲು ಪ್ರಯತ್ನಿಸಿರುವುದು ಕೃಷ್ಣನ ಮೇಲೆ ತೋರಿದ ಅಪಾರ ಪ್ರೀತಿಯನ್ನು ಕಾಣಬಹುದು.

**ಕೊನೆ ಟಿಪ್ಪಣಿಗಳು:**

1. ಸಮಗ್ರ ದಾಸ ಸಾಹಿತ್ಯ : ಸಂಪುಟ 5, ಭಾಗ 1, ಕೀರ್ತನೆ 71, ಪುಟ 64, ಪ್ರೊ. ಸುಧಾಕರ.
2. ಸಮಗ್ರ ದಾಸ ಸಾಹಿತ್ಯ : ಸಂಪುಟ 5, ಭಾಗ 1, ಕೀರ್ತನೆ 71, ಪುಟ 64–65, ಪ್ರೊ. ಸುಧಾಕರ.
3. ಸಮಗ್ರ ದಾಸ ಸಾಹಿತ್ಯ : ಸಂಪುಟ 5, ಭಾಗ 1, ಕೀರ್ತನೆ 65, ಪುಟ 59, ಪ್ರೊ. ಸುಧಾಕರ.
4. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 21, ಪುಟ 87, ಪ್ರೊ. ಸುಧಾಕರ.
5. ಕನಕ ಸಾಹಿತ್ಯ ದರ್ಶನ ಕೀರ್ತನೆ 21, ಪುಟ 87, ಪ್ರೊ. ಸುಧಾಕರ.
6. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 99, ಪುಟ 62, ಪ್ರೊ. ಸುಧಾಕರ
7. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 69, ಪುಟ 62, ಪ್ರೊ. ಸುಧಾಕರ.
8. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 63, ಪ್ರೊ. ಸುಧಾಕರ.

9. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 63, ಪುಟ 57, ಪ್ರೊ. ಸುಧಾಕರ.
10. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 63, ಪುಟ 57, ಪ್ರೊ. ಸುಧಾಕರ.
11. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 63, ಪುಟ 57, ಪ್ರೊ. ಸುಧಾಕರ.
12. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 63, ಪುಟ 57, ಪ್ರೊ. ಸುಧಾಕರ.
13. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 63, ಪುಟ 57, ಪ್ರೊ. ಸುಧಾಕರ.
14. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 63, ಪುಟ 57, ಪ್ರೊ. ಸುಧಾಕರ.
15. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 63, ಪುಟ 57, ಪ್ರೊ. ಸುಧಾಕರ.
16. ಕನಕ ಸಾಹಿತ್ಯ ದರ್ಶನ ಸಂಪುಟ 5, ಭಾಗ 1, ಕೀರ್ತನೆ 26, ಪುಟ 95, ಪ್ರೊ. ಸುಧಾಕರ.
17. ಕನಕ ಸಾಹಿತ್ಯ ದರ್ಶನ ಸಂಪುಟ 5, ಭಾಗ 1, ಕೀರ್ತನೆ 26, ಪುಟ 95, ಪ್ರೊ. ಸುಧಾಕರ.
18. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 27, ಪುಟ 97, ಪ್ರೊ. ಸುಧಾಕರ.
19. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 27, ಪುಟ 97, ಪ್ರೊ. ಸುಧಾಕರ.

***

# ಅಧ್ಯಾಯ 4

## ಕನಕದಾಸರು: ಜೀವನ ಮತ್ತು ಪರಿಸರ

ಕನಕದಾಸರು ಸಾಂಸಾರಿಕ ಜೀವನದಲ್ಲಿ ಜಿಗುಪ್ಸೆಗೊಂಡು ನಶ್ವರ ದೇಹವಿದು ಶಾಶ್ವತವಲ್ಲ ಎಂಬ ನಂಬಿಕೆಯನ್ನು ವ್ಯಕ್ತಪಡಿಸಿ ಸಮಗ್ರ ಸಂಪತ್ತನ್ನು ಕೇಶವನ ಸನ್ನಿಧಿಗೆ ಅರ್ಪಿಸಿ ವೈರಾಗ್ಯ ಭಾವ ತಳೆದರೆಂಬುದು ಅವರ ಅಸಂಖ್ಯಾತ ಕೀರ್ತನೆಗಳಲ್ಲಿ ಕಂಡು ಬರುತ್ತದೆ. ಕನಕನಿಧಿ ಸಿಕ್ಕರೂ ಅದನ್ನು ಅಸಹಾಯಕರು ಮತ್ತು ಬಡವರಿಗೆ ದಾನಮಾಡಿದರು ಅನೇಕ ಗುಡಿ, ಛತ್ರ ಶಾಲೆಗಳನ್ನು ಕಟ್ಟಿಸಿ ಸಮಾಜದ ಜನರಿಗೆ ಅನುಕೂಲ ಒದಗಿಸಿ ಕೊಟ್ಟರು. ಅಂಥ ಮಹಾತ್ಮ ಕನಕದಾಸರ ಜೀವನ ಸುಖಕರವಾಗಿರದೆ, ಅತ್ಯಂತ ಕ್ಲಿಷ್ಟಕರದಾಗಿದ್ದುದನ್ನ ಅವರು ತಮ್ಮ ಕೀರ್ತನೆಗಳಲ್ಲಿ ಪ್ರಸ್ತುತಪಡಿಸಿ ಅಂದಿನ ಸಮಾಜದಲ್ಲಿಯ ಜನರ ಅಜ್ಞಾನ ದ್ವೇಷ, ಸ್ವಾರ್ಥ ಹಾಗೂ ಜಾತೀಯತೆಯನ್ನು ಕುರಿತು ನುಡಿದಿದ್ದಾರೆ. ಕನಕದಾಸರು ತಮ್ಮ ವೈಚಾರಿಕತೆಯ ಮಾರ್ಗದುದ್ದಕ್ಕೂ ಸರ್ವರೊಳು ಐಕ್ಯತೆ ಮತ್ತು ಶಾಂತಿಯನ್ನು ಬೆಳೆಸಲು ಪ್ರಯತ್ನಿಸಿದವರಾಗಿದ್ದಾರೆ.

ಮನುಷ್ಯ ಜ್ಞಾನಿಯಾದರೆ ಬೇರೊಬ್ಬ ಮನುಷ್ಯನ ಒಳಿತು-ಕೆಡುಕುಗಳ ಕುರಿತು ಚಿಂತಿಸುತ್ತಾನೆ. ಆಪತ್ಕಾಲದಲ್ಲಿ ಅವನಿಗೆ ಸಹಾಯ ಮಾಡುತ್ತಾನೆ. ಅಪಾಯಕ್ಕೆ ಸಿಲುಕಿದವರನ್ನು ರಕ್ಷಿಸುವ ಕಾರ್ಯಕ್ಕೆ ಪ್ರಯತ್ನಿಸುತ್ತಾನೆ. ಬೇರೊಬ್ಬರಿಂದ ಹಿಂಸೆಗೊಳಗಾಗುವ ಸಂದರ್ಭದಲ್ಲಿ ಅವನನ್ನು ಬೆಂಬಲಿಸಿ ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಆದರೆ ಅದೇ ಮನುಷ್ಯ ಅಜ್ಞಾನಾಂಧಕಾರದಲ್ಲಿ ಮುಳುಗಿ ತನ್ನ ಸ್ವಾರ್ಥ ಬಯಸುವವನಾದರೆ ಅವನು ಯಾವ ಸಾಮಾಜಿಕ ಹಿತಕಾರ್ಯಗಳನ್ನು ಮಾಡಲಾರ. ಬಲಿಷ್ಠರಿಂದ ದೌರ್ಜನ್ಯಕ್ಕೊಳಗಾಗಿ ಬೀದಿಗೆ ಬಿದ್ದಿದ್ದ ಜನರ ಪರ ದನಿ ಎತ್ತಿ ಸಹಕಾರ ಮನೋಭಾವನೆ ಬಿಂಬಿಸಿರುವುದು, ಕನಕದಾಸರ ಸಹೃದಯತೆಗೆ ಹಿಡಿದ ಕನ್ನಡಿಯಾಗಿದೆ.

ಕನಕದಾಸರು ತಮ್ಮ ಜೀವನದಲ್ಲಿ ಅನೇಕ ಸಾರಿ ಸಂಕಷ್ಟಕ್ಕೆ ಸಿಲುಕಿದರು. ಆ ಸಮಯದಲ್ಲಿ ಯಾರೂ ಅವರ ಸಹಾಯಕ್ಕೆ ಬಾರದೇ ಅವರನ್ನು ತುಳಿಯುವ ಕೆಲಸ

ಮಾಡಿದರು. ಅವರನ್ನು ಯಾರೂ ಬೆಂಬಲಿಸಲು ಪ್ರಯತ್ನಿಸಲಿಲ್ಲ. ಕನಕದಾಸರಿಗೆ ಅಪಾರ ಧನ ಕನಕಗಳ ಹುಂಡಿಯು ಸಿಕ್ಕಿತ್ತು. ಅದನ್ನು ಅವರು ತಮ್ಮ ಸ್ವಂತಕ್ಕೆ ಎಳ್ಳಷ್ಟೂ ಬಳಸದೆ ಸಮಾಜ ಸುಧಾರಣಾ ಕಾರ್ಯಕ್ಕೆ ಧಾರೆ ಎರೆದರು. ಆದಿಕೇಶವನ ಗುಡಿ ಕಟ್ಟಿಸಿ ಅದರ ಪೂಜೆ, ಪುನಸ್ಕಾರ, ಜಾತ್ರೆ, ರಥೋತ್ಸವ ಇತ್ಯಾದಿಗಳನ್ನು ತಪ್ಪದೇ ನಡೆಸುತ್ತ ಬಂದರು. ಅವಕಾಶವಾದಿ ಅಸೂಯಾಪರರು ಇದನ್ನು ಸಹಿಸದಾದರು. ಕನಕನ ವರ್ಚಸ್ಸಿಗೆ ಧಕ್ಕೆ ಬರುವಂತೆ ಮಾಡಲು ಷಡ್ಯಂತ್ರ ರಚಿಸಿ ಅಧಿಕಾರದಿಂದ ಕೆಳಗಿಳಿಸುವ ಹುನ್ನಾರಕ್ಕೆ ಮುಂದಾದರು.

ಜೀವನದಲ್ಲಿ ಅಧಿಕಾರದ ಆಕಾಂಕ್ಷಿಗಳಾಗಿದ್ದ ದಾಯಾದಿಗಳ ಕುತಂತ್ರಕ್ಕೆ ಬಲಿಯಾಗಿ ಜಿಗುಪ್ಸೆಗೊಂಡರು. ಕೃಷ್ಣದೇವರಾಯನ ಕಿರಿಯ ಮಗ ಪಟ್ಟವೇರಿದರೂ ಕೃಷ್ಣದೇವರಾಯನ ತಮ್ಮ ಅಚ್ಯುತ ರಾಯನೇ ಆಡಳಿತ ನೋಡಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಕನಕನ ದಾಯಾದಿ 'ರಾಜ್ಯದ ಬೊಕ್ಕಸವನ್ನು ಕನಕ ಅಡ್ಡಾದಿಡ್ಡಿಯಾಗಿ ದುರುಪಯೋಗ ಮಾಡುತ್ತ ದೇವರ ಉತ್ಸವ, ಜಾತ್ರೆ ರಥೋತ್ಸವಗೆ ಖರ್ಚುಮಾಡುತ್ತಿದ್ದಾನೆ. ಎಂದು ಸುಳ್ಳು ಚಾಡಿ ಹೇಳಿದ ಕಾರಣದಿಂದ ಅಚ್ಯುತರಾಯ ಕನಕನನ್ನು ನಾಡಗೌಡಿಕೆ (ಸೇನಾಧಿಪತಿ) ಸ್ಥಾನದಿಂದ ಪದಚ್ಯುತಗೊಳಿಸಿದ. ಇದರಿಂದ ಕನಕದಾಸನ ಮನಸ್ಸಿಗೆ ತುಂಬಾ ಘಾಸಿಯುಂಟಾಗಿ ದಿಗ್ಭ್ರಾಂತರಾದರು. ಚಾಡಿಕೋರರ ಕುತಂತ್ರಕ್ಕೆ ಬಲಿಯಾಗಿ ಅಧಿಕಾರ ಕಳದುಕೊಂಡ ಚಿಂತೆ ಅವರನ್ನು ಬಾಧಿಸಲಿಲ್ಲ. ದಾಯಾದಿಗಳು ತಮ್ಮ ಅಧಿಕಾರ ಲಾಲಸೆಯಿಂದ ಚಾಡಿ ಹೇಳಿ ಸುಳ್ಳು ಆಪಾದನೆ ಹೊರೆಸಿ ತಮ್ಮ ಕುತಂತ್ರ ಸಾಧಿಸಿದರೆಂಬುದು ಚಿಂತನೆಗೆ ಈಡುಮಾಡಿತು. ಸಮಾಜಕ್ಕಾಗಿ ಏನೆಲ್ಲ ಮಾಡುತ್ತಿದ್ದರೂ ಆಪತ್ಕಾಲದಲ್ಲಿ ನನ್ನ ಒಳ್ಳೆಯತನವನ್ನು ಬೆಂಬಲಿಸಲು ಯಾರೂ ಬರಲಿಲ್ಲ ಎಂದು ಮನದಲ್ಲೆ ಮರುಗಿದರು. ಜಗದಲ್ಲಿ ಒಳಿತಿಗಾಗಿ ಚಿಂತಿಸುವವನ ಪರ ಯಾರು ಇಲ್ಲವೆ? ಎಂಬ ಪ್ರಶ್ನೆಗೆ ಉತ್ತರವಾಗಿ ತಮ್ಮನ್ನು ತಾವೇ ವಿಮರ್ಶಿಸಿಕೊಂಡಿರುವುದು ಜನರಲ್ಲಿರುವ ನಿರ್ದಯ ಗುಣಗಳನ್ನು ಎತ್ತಿ ತೋರಿಸಿದ್ದಾರೆ.

ಆರಿಗಾರಿಲ್ಲ ಆಪತ್ಕಾಲದೊಳಗೆ
ವಾರಿಜಾಕ್ಷನ ನಾಮ ನೆನೆಕಂಡ್ಯ ಮನವೆ'

ಹರಿಯ ಮೇಲೆ ಭಕ್ತಿ, ವಿಶ್ವಾಸಗಳನ್ನಿಟ್ಟು ನಡೆದರೆ ಆಪತ್ಕಾಲದಲ್ಲಿ ಅವನಿಂದಲೇ ರಕ್ಷೆ ಸಿಕ್ಕೀತೇ ಹೊರತು ಮನುಷ್ಯರಿಂದಲ್ಲ ಎಂಬುದನ್ನು ನಿಷ್ಕರುಣ ಮನಸ್ಸಿನವರನ್ನು ಖಂಡಿಸಿ ಹೇಳಿದ್ದಾರೆ.

ಕನಕದಾಸರು ಡಣಾಯಕ ಹುದ್ದೆಯನ್ನು ತ್ಯಜಿಸಿದ ನಂತರ ತನ್ನ ಮಾವನ ಮನೆಯಲ್ಲಿ ಕೆಲ ದಿನಗಳವರೆಗೆ ಇದ್ದರು. ಆ ವೇಳೆಯಲ್ಲಿ ಜನರು ಆಡಿಕೊಂಡ ನಿಂದನೆಯ ನುಡಿಗಳನ್ನು ಸೂಕ್ಷ್ಮವಾಗಿ ಕೇಳಿಸಿಕೊಂಡ ಕನಕದಾಸರು ನೊಂದರು, ಪಶ್ಚಾತ್ತಾಪ ಪಟ್ಟರು. ತಮ್ಮ ಕೀರ್ತನೆಗಳ ಮುಖಾಂತರ ಮಾವನ ಮನೆಯಲ್ಲಾಗಲಿ, ಪರರ ಮನೆಯಲ್ಲಾಗಲಿ ಇರುವುದು

ಅಪಮಾನಕರವೆಂದು ಹೇಳಿದರು. ಮನುಷ್ಯನ ಸ್ವಾಭಿಮಾನಕ್ಕೆ ಧಕ್ಕೆ ಬರದಂತೆ ನೋಡಿಕೊಳ್ಳಬೇಕೆಂದರೆ ಪರರ ಮನೆಯಲ್ಲಿರಬಾರದು ಎಂದು ಜನರಿಗೆ ಮಾರ್ಗದರ್ಶನ ಮಾಡಿದ್ದಾರೆ. ಅಂದರೆ ತಿಳಿದವರು ಮಾವನ ಮನೆಯಲ್ಲಿರುವುದು ತರವಲ್ಲವೆಂಬುದು ಇದರರ್ಥ.

ಹರಿವ ಹಾವನ್ನು ಹಿಡಿದು ಥಳಗಿಸಬಹುದು. ಸಂದರ್ಭಕ್ಕನುಸಾರವಾಗಿ ಪ್ರಾಣವನ್ನೂ ಕೊಡಬಹುದು ಉರಿವ ಬೆಂಕಿಯ ಕಿಚ್ಚನ್ನು ಕೈಯಲ್ಲಿ ಹಿಡಿದು ನುಂಗಬಹುದು. ಅದರಿಂದ ಮಾನ ಹೋಗದು. ಆದರೆ ಹೆಂಡತಿಯ ಮನೆಯಲ್ಲಿದ್ದು ತಮ್ಮ ಅಸಹಾಯಕತೆ ತೋರಿದರೆ ಅಲ್ಲಿ ನಿಮ್ಮ ಗೌರವ ಕಿರಿದಾಗುತ್ತದೆ. ಆದ್ದರಿಂದ ಜೀವನದಲ್ಲಿ ಎಷ್ಟೇ ಕಷ್ಟಗಳು ಬಂದರೂ ಹೆಂಡತಿಯ ಮನೆಯಲ್ಲಿರುವ ಪ್ರಯತ್ನ ಮಾಡಬಾರದು ಎಂದು ಕನಕದಾಸರು ಜನರಿಗೆ ನೀತಿ ಬೋಧನೆ ಮಾಡಿದ್ದಾರೆ. ಮಾವನ ಮನೆಯಲ್ಲಿರುವುದಕ್ಕಿಂತ ಸಾಯುವುದು ಲೇಸೆಂಬುದು ಕನಕದಾಸರ ಅಭಿಪ್ರಾಯವಾಗಿದೆ:

ಹಾವು ಹಿಡಿಯಲುಬಹುದು ಹರಣ ನೀಡಲು ಬಹುದು
ಬೇವ ಕಿಚ್ಚನು ಹಿಡಿದು ನುಂಗಬಹುದು.
ಭಾವೆಯಳ ತಂದೆ ಮನೆಯಲ್ಲಿ ಜೀವಿಪುದಕ್ಕಿಂತ
ಸಾವುದೇ ಲೇಸು ಅಭಿಮಾನಿಗಳಿಗೆ[2]

ಅಳಿಯ ತನ್ನ ಹೆಂಡಿರು ಮಕ್ಕಳೊಡನೆ ಮಾವನ ಮನೆಗೆ ಹೋದಾಗ ಆರಂಭದ ಒಂದು ತಿಂಗಳು ಅಳಿಯನಿಗೆ ಗೌರವ ಸಿಗುತ್ತದೆ. ಎಲ್ಲರೂ ಮಧುರ ಮಾತುಗಳನ್ನಾಡಿ ಉಪಚರಿಸುತ್ತಾರೆ. ಅವು ಒಂದೆರಡು ತಿಂಗಳು ಮಾತ್ರ ಹಿತವಾಗಿದ್ದು ತದ ನಂತರ ಒಳಗೊಳಗೆ ಮಾತನಾಡಿಕೊಳ್ಳುತ್ತ ಅಳಿಯನನ್ನು ಹೊರಗಟ್ಟಲು ಪ್ರಯತ್ನಿಸುತ್ತಾರೆ. ಇದರಲ್ಲಿ ಯಾವುದೇ ಸಂದೇಹವಿಲ್ಲ. ಆದ್ದರಿಂದ ತಿಳಿದವರು ಮಾವನ ಮನೆ ಸೇರಬಾರದೆಂದಿದ್ದಾರೆ.

ಬಂದೊಂದು ತಿಂಗಳೊಳು ಬಹುಮಾನ ನಡತೆಗಳು
ಬಂದೆರಡು ತಿಂಗಳೊಳಗೆ ಹಿತವಾದವು
ಒಂದೊಂದಭದ್ರ ನುಡಿ ಒಳಗೊಳಗೆ ಹುಟ್ಟುವುವು
ಸಂದೇಹವೇಕೆ ಸಂಸಾರಿಗಳಿಗೆ[3]

ಕೀರ್ತನೆಯ ನುಡಿಗಳು ಮಾವನ ಮನೆಯಲ್ಲಿ ಕನಕದಾಸರಿಗಾದ ಅಪಮಾನದ ಸಂಗತಿಗಳ ನೈಜತೆಯನ್ನು ತಿಳಿಸುತ್ತವೆ.

ಈ ಪರಿಯಲುಂಬಂಥ ಅಳಿಯ ಭೋಜನಕ್ಕಿಂತ
ಗೋಪಾಳ ಲೇಸು ಅಭಿಮಾನಿಗಳಿಗೆ
ಶ್ರೀಪತಿ ನೆಲೆಯಾದಿಕೇಶವನ ಚರಣ ಸ
ಮೀಪದಲಿ ವಾಸಿಪುದೇ ವಾಸಿ ಮನವೆ[4]

ಮುಂದೆ ನೀಡಿ ಹಿಂದೆ ಹಂಗಿಸುವುದು ಭಗವಂತನಿಗೆ ಪ್ರಿಯವಾದುದಲ್ಲ. ಅಂಥವರ ಮನೆಯಲ್ಲಿ ಅಳಿಯನಾದವನು ಭೋಜನ ಮಾಡುವುದಕ್ಕಿಂತ ಗೋಪಾಳವನ್ನು ಹೆಗಲಿಗೇರಿಸಿ ತಿರಿದು ತಿಂದು ಆದಿಕೇಶವನ ಗುಡಿಯಲ್ಲಿ ಇರುವುದು ಶ್ರೇಷ್ಠವಾದುದು. ಅಂಥ ಸ್ವಾಭಿಮಾನಿಗಳನ್ನು ದೇವರು ಮೆಚ್ಚುತ್ತಾನೆ. ಎಂದು ನೀತಿಯ ಪಾಠ ಹೇಳಿದ್ದಾರೆ. ಕನಕದಾಸರ ದೃಷ್ಟಿಯಲ್ಲಿ ಪರಾವಲಂಬ ಜೀವನ ನರಕಯಾತನೆಗೆ ಗುರಿ ಪಡಿಸುತ್ತದೆ, ಅಗೌರವವಕ್ಕೆ ಎಡೆ ಮಾಡಿಕೊಡುತ್ತದೆ ಎಂಬುದು ಕನಕದಾಸರ ಅಭಿಪ್ರಾಯ.

ಕನಕದಾಸರ ಮೇಲೆ ದಯ ಮಾಡಿ ಶಿಷ್ಯನನ್ನಾಗಿ ಸ್ವೀಕರಿಸಿದ್ದರಿಂದ ವ್ಯಾಸರನ್ನು ಮಠದ ಕರ್ಮಠರೆಲ್ಲ ದೂರತೊಡಗಿದರು. ನಿತ್ಯವೂ ಪೂಜಾರಾಧನೆಯೊಂದಿಗೆ ವ್ಯಾಸರು ತೀರ್ಥಪ್ರಸಾದ ನೀಡುತ್ತಿದ್ದರು. ವೈದಿಕ ಶಿಷ್ಯರೆಲ್ಲರೂ ಸಾಲಾಗಿ ನಿಂತು ತೀರ್ಥ ಪಡೆಯುವ ವೇಳೆ ಕನಕದಾಸರು ದೂರ ನಿಂತಿದ್ದರು. ವ್ಯಾಸರಾಯರ ಕಣ್ಣಿಗೆ ಕಾಣದೇ ಇದ್ದಾಗ ತೀರ್ಥ ಪಡೆಯಲು ಕನಕನನ್ನೂ ಕರೆಯಿರಿ ಎನ್ನುತ್ತಿದ್ದರು. ದುರುಳ ವೈದಿಕ ವಿದ್ವಾಂಸರೆಲ್ಲರೂ ವ್ಯಾಸರಾಯರ ಮೇಲೆ ಕೆಂಡಾಮಂಡಲರಾಗುತ್ತಿದ್ದರು. ಶೂದ್ರ ಕನಕದಾಸನಿಗೂ ಪವಿತ್ರ ತೀರ್ಥಪ್ರಸಾದ ನೀಡಿ ಸಂಪ್ರದಾಯ ಅಪವಿತ್ರಗೊಳಿಸುವ ಇವರ ಮತಿಗೆ ಮಂಕು ಹಿಡಿದಿದೆಯೆ ಎಂದು ಗೇಲಿ ಮಾಡುತ್ತಿದ್ದರು. ನೂರಾರು ವರ್ಷಗಳಿಂದ ನಡೆದು ಬಂದಿದ್ದ ಮಠದ ಸಂಪ್ರದಾಯವನ್ನೇ ಮುರಿದು ಹಾಕುವ ಕೆಲಸ ವ್ಯಾಸರಿಂದಾದದ್ದು ದಾಖಲೆ ಎನ್ನಬಹುದು. ವೈದಿಕ ಮಠದ ಸಂಪ್ರದಾಯಕ್ಕೆ ವ್ಯಾಸರು ಅಪಚಾರವೆಸಗುತ್ತಿದ್ದಾರೆ. ಇವರನ್ನು ಮಠದ ಗುರುಗಳನ್ನಾಗಿ ಮಾಡಿದ್ದು ನಿರರ್ಥಕವಾಯಿತು. ಇವರ ಸನ್ಯಾಸಿ ಜೀವನ ಸಾರ್ಥಕವಾಯಿತು. ಎಂದು ಟೀಕೆಯ ನುಡಿಗಳನ್ನಾಡಿ ವ್ಯಾಸರಾಯರನ್ನು ಶಪಿಸತೊಡಗಿದರು. ವ್ಯಾಸರಾಯರು ತಪಸ್ವಿಗಳೂ, ಜ್ಞಾನಿಗಳೂ ಆಗಿದ್ದರಿಂದ ಕನಕದಾಸನಲ್ಲಿಯ ಜ್ಞಾನ ಸಂಪತ್ತನ್ನು ಅರಿತವರಾಗಿದ್ದರು. ಮಠಿಕ ವಿದ್ವಾಂಸರ ಟೀಕೆಯನ್ನಾಲಿಸಿದ ವ್ಯಾಸರಾಯರು ಅವರ ಅಜ್ಞಾನವೇ ಈ ರೀತಿ ಆಡಿಸುತ್ತಿದೆ ಎಂದು ನಸು ನಕ್ಕರು. ಭೇದ-ಭಾವದ ಕುಸಂಪ್ರದಾಯದಿಂದ ಹೊರಬಂದು ಮಾನವತೆಯಿಂದ ವರ್ತಿಸಿ ಎಲ್ಲ ವರ್ಗದವರನ್ನು ಗೌರವಿಸಲು ವ್ಯಾಸರಾಯರ ದಲಿತಪರ ಕ್ರಾಂತಿ ಮಾದರಿಯಾಯಿತು.

ತೀರ್ಥವನು ಕೊಡುವಾಗ ಕನಕನ್ನ ಕರೆಯೆನಲು
ದೂರ್ತರಾಗಿದ್ದ ವಿದ್ವಾಂಸರೆಲ್ಲ
ಸಾರ್ಥಕವಾಯ್ತು ಇವರ ಸನ್ಯಾಸಿತನವೆಲ್ಲ
ಪೂರ್ತ್ಯಾಗಲೆಂದು ಯತಿ ನಗುತಲಿಹನು[5]

ವ್ಯಾಸರಾಯರು ಕನಕರಲ್ಲಿಯ ಜ್ಞಾನದ ಮೌಲ್ಯವನ್ನು ಶಿಷ್ಯರಿಗೆ ತೋರಿಸಲು ಮುಂದಾದರು. ಕನಕದಾಸರನ್ನೊಳಗೊಂಡು ಎಲ್ಲ ವೈದಿಕ ಶಿಷ್ಯರನ್ನು ಪರೀಕ್ಷೆಗೊಳಪಡಿಸಿದರು. ಎಲ್ಲರಿಗೂ ಒಂದೊಂದು ಬಾಳೆ ಹಣ್ಣನ್ನು ಕೊಟ್ಟು ಯಾರೂ ಇರದ ಹಾಗೂ ನೋಡದ

ಸ್ಥಳದಲ್ಲಿ ಈ ಬಾಳೆಹಣ್ಣನ್ನು ತಿಂದು ಬನ್ನಿರೆಂದು ಹೇಳಿದರು. ವೈದಿಕ ಶಿಷ್ಯಂದಿರೆಲ್ಲರೂ ಯಾರೂ ಇರದ ಹಾಗೂ ನೋಡದ ಸ್ಥಳದಲ್ಲಿ ಬಾಳೆಹಣ್ಣನ್ನು ಬೇರೆ ಬೇರೆ ಸ್ಥಳದಲ್ಲಿ ಕುಳಿತು ತಿಂದು ಬಂದುದನ್ನು ಗುರುಗಳಿಗೆ ಹೇಳಿದರು. ಆದರೆ ಕನಕದಾಸ ಮಾತ್ರ ಬಾಳೆಹಣ್ಣನ್ನು ತಿನ್ನದೇ ಮರಳಿ ವ್ಯಾಸರಾಯರ ಕೈಗಿತ್ತು ಗುರುಗಳೇ ಯಾರೂ ನೋಡದೆ ಇರುವ ಸ್ಥಳ ನನಗೆ ಗೋಚರಿಸಲಿಲ್ಲ. ಎಲ್ಲಿ ಹೋದರೂ ನನ್ನತ್ತ ಭಗವಂತನ ದೃಷ್ಟಿ ಇದ್ದುದರಿಂದ ಈ ಬಾಳೆಹಣ್ಣನ್ನು ತಿನ್ನಲಾಗಲಿಲ್ಲ. ಎಂದು ಬಾಳೆಫಲವನ್ನು ಹಿಂದಿರುಗಿಸಿದಾಗ ಗುರುಗಳಿಗೆ ಪರಮಾಶ್ಚರ್ಯವಾಯಿತು. ಗುರುಗಳ ಆಜ್ಞಾನುಸಾರ ಬಾಳೆಹಣ್ಣನ್ನು ತಿಂದ ಶಿಷ್ಯರು ಅಲ್ಲಿಯೂ ಕನಕದಾಸರನ್ನು ದೋಷಿಸದೇ ಇರಲಿಲ್ಲ. ವ್ಯಾಸರಾಯರು ಕನಕದಾಸರನ್ನುದ್ದೇಶಿಸಿ ಪ್ರಶ್ನಿಸುತ್ತ, ಎಲ್ಲೆಲ್ಲಿ ನಿನ್ನನ್ನು ನೋಡುವ ಜನರಿದ್ದರು? ಎಂದು ಕೇಳಲಾಗಿ ಈ ಜಗದ ಅಣು-ರೇಣು-ತೃಣ-ಕಾಷ್ಟಗಳಲ್ಲಿ ದೇವರು ಅಡಗಿದ್ದಾನೆ. ಆತನು ಸರ್ವಾಂತರ್ಯಾಮಿಯಾಗಿದ್ದು ನಾನು ಹೋದಡೆಯಲ್ಲ ನನ್ನ ಹಿಂದೆಯೇ ಇರುತ್ತಿದ್ದ. ನನ್ನೆದುರಿಗೆ ನಿಂತು ನನ್ನನ್ನೇ ನೋಡುತ್ತಿದ್ದುದು ಕಂಡಿತು. ಭಗವಂತನನ್ನು ಕಣ್ತಪ್ಪಿಸಿ ಬಾಳೆಹಣ್ಣನ್ನು ತಿಂದರೆ ಗುರುದ್ರೋಹವಾಗುವುದೆಂದು ಭಾವಿಸಿ ಬಾಳೆಹಣ್ಣನ್ನು ತಿನ್ನದೆಯೇ ಮರಳಿ ತಂದಿದ್ದೇನೆ ಎಂದು ಹೇಳಿದಾಗ ವ್ಯಾಸರಾಯರನ್ನೊಳಗೊಂಡ ಮಠದ ಎಲ್ಲ ಶಿಷ್ಯಂದಿರೂ, ವಿಚಾರಮತಿಗಳೂ ಸ್ತಂಭೀಭೂತರಾಗಿ ಕನಕದಾಸನನ್ನೇ ದಿಟ್ಟಿಸಿದರು.

> ಡಿಂಬದೊಳು ಶಬ್ದ ವಾಗಾದಿ ಶ್ರೋತೃಗಳಲ್ಲಿ
> ಇಂಬಾಗಿ ತತ್ತ್ವೇಶರೆಲ್ಲ ತುಂಬಿಹರು
> ತಿಂಬುವುದು ಹ್ಯಾಂಗೆನುತ ವ್ಯಾಸರಾಯರ ಕೇಳೆ
> ಕಂಬದಂತಾದವರೆಲ್ಲ ಕುಳಿತವರು[6]

ವೈದಿಕ ಶಿಷ್ಯರ ಮೇಲೆ ವ್ಯಾಸರು ಕುಪಿತಗೊಂಡು ನಾನು ಇಂದಿನವರೆಗೂ ಇವರಿಗೆ ಧಾರೆ ಎರೆದ ವಿದ್ಯೆ ಎಲ್ಲವೂ ವ್ಯರ್ಥವಾಯಿತು. ಇಂಥ ಅಯೋಗ್ಯ ಶಿಷ್ಯರನ್ನು ಪಡೆದ ನಾನು ಪಶ್ಚಾತ್ತಾಪ ಪಡುವಂತಾಯಿತು. ಶೂದ್ರನಾದ ಕನಕದಾಸನನ್ನು ಶಿಷ್ಯನನ್ನಾಗಿ ಪಡೆದು ನಾನು ಧನ್ಯನಾಗಿದ್ದೇನೆ. ಎಂದು ವ್ಯಾಸರಾಯರು ಬಹಿರಂಗವಾಗಿ ಹೇಳಿದರು. ಛೀ ಪಾಪಿಗಳೇ ಕುಲದ ಕುಲೀನತೆಯಲ್ಲಿ ನಿಮ್ಮ ಮಾನವೀಯತೆ ಕಳೆದುಕೊಂಡಿರುವ ಶತಮೂರ್ಖರು ನೀವು. ಅಜ್ಞಾನದ ಪರೀಧಿಯಲ್ಲಿರುವ ನೀವು ದೇವರಿರುವ ಸ್ಥಳವಿರಲಿ ನೀವಿರುವ ಸ್ಥಳವನ್ನೇ ಅರಿಯಲು ಅಸಮರ್ಥರಿದ್ದೀರಿ. ನಿಮಗೆ ಕುಲದ ಅಹಂಕಾರವಿದೆಯೇ ಹೊರತು, ಜ್ಞಾನ ಸಂಪಾದನೆಯ ಆಸೆಯಿಲ್ಲ. ನೀವು ಸಮಾನತೆಯ ಸಮತೋಲನ ಬಯಸದ ಕುಲಾಂಧಕರಾಗಿರುವಿರಿ ಎಂದು ಪರಿಪರಿಯಾಗಿ ಶಪಿಸಿದರು. ಮೂರ್ಖರೆ ಕನಕನಾಡುವ ಮಾತಿನ ಅರ್ಥ ನಿಮ್ಮಂಥ ಮೂಢಮತಿಗಳಿಗೆಲ್ಲಿ ಅರ್ಥವಾದೀತು. ಇಂಥ ಅಪಾರ ಜ್ಞಾನವುಳ್ಳ ಕನಕನನ್ನು ಕೀಳು ಕುಲದ ಸಾಮಾನ್ಯನೆಂದು ತಿಳಿದುದು ನಿಮ್ಮ ಹುಚ್ಚುತನವೇ ಸರಿ. ನಿಮ್ಮಂಥ ಪಾಮರರಿಗೆ ಕನಕನ ಜ್ಞಾನದ ಹಿರಿಮೆ ಎಂತು ತಿಳಿದೀತು. ಕನಕನ ಮಾತಿನಲ್ಲಿಯ ಆಂತರಿಕ ಅರ್ಥವನ್ನು ಅವನ ಮಹಿಮೆಯನ್ನು ನಿಮ್ಮಂಥ

ಮೂಢರರಿಯಬಲ್ಲರೇ? ಕನಕದಾಸರ ಜ್ಞಾನದ ಸಾಮರ್ಥ್ಯವನ್ನು ಮಠದ ಸರ್ವ ಶಿಷ್ಯಂದಿರೂ ಅರಿಯಬೇಕೆಂದು ವ್ಯಾಸರಾಯರು ಕಿವಿ ಮಾತು ಹೇಳಿದರು.

ವೈದಿಕ ಶಿಷ್ಯರು ಬಾಳೆಹಣ್ಣು ತಿನ್ನುವ ತವಕದಲ್ಲಿ ಭಗವಂತನು ಸರ್ವವ್ಯಾಪಿಯಾಗಿದ್ದು ಅಮೂರ್ತನಾಗಿ ನಮ್ಮನ್ನು ನೋಡುವನೆಂಬ ಜ್ಞಾನ ಅವರಿಗಿದ್ದಿರಲಿಲ್ಲ. ಗುರುಗಳು ಹೇಳಿದಂತೆ ಮಾಡಿದೆನಷ್ಟೇ ಎಂಬ ಹೆಮ್ಮೆ ಅವರಲ್ಲಿತ್ತು. ಆದರೆ ಕನಕದಾಸರು ಆ ರೀತಿ ಮಾಡಲೇ ಇಲ್ಲ. ದೇವರು ಇರದಿರುವ ಸ್ಥಳವಾವೂದೂ ಇಲ್ಲದಿರುವಾಗ ಅಮೂರ್ತನಾದ ದೇವರು ನನ್ನನ್ನು ನೋಡುತ್ತಾನೆ. ಆದಾಗ್ಯೂ ಬಾಳೆಹಣ್ಣು ತಿಂದು ಗುರುಗಳನ್ನು ವಂಚಿಸುವುದು ಗುರುದ್ರೋಹವೇ ಆಗುತ್ತದೆ ಎಂಬುದು ಕನಕದಾಸರ ನಿಲುವಾಗಿತ್ತು. ಅಂದಿನ ಗುರು-ಶಿಷ್ಯರ ಸಂಬಂಧದಲ್ಲಿ ಪ್ರಾಮಾಣಿಕತೆ, ಗುರುನಿಷ್ಠೆ ಮುಂತಾದ ಶಿಷ್ಟ ಆಚರಣೆಗಳಲ್ಲಿ ಶಿಷ್ಯನ ಪ್ರಾಮುಖ್ಯತೆಯನ್ನು ಅಂದಿನ ವರ್ಣಮತಿಯರಿಗೆ ನೀತಿ ಪಾಠ ಹೇಳಿದ್ದಾರೆ. ಕನಕದಾಸನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ವ್ಯಾಸರಾಯರು ವೈದಿಕ ಸಂಪ್ರದಾಯದ ಅನಿಷ್ಠತೆಯನ್ನು ಮುರಿದು ಕಟ್ಟಿದ ಕೆಲಸ ಅಮೋಘವಾದುದಾಗಿದೆ. ಕನಕದಾಸರು ಅಂತರಾಳದಲ್ಲಿ ಬೇರೂರಿದ್ದ ಮತಾಂಧತೆಯ ಕಲ್ಮಶವನ್ನು ಹೋಗಲಾಡಿಸಲು ಮೌನವಾಗಿಯೇ ಬಂಡಾಯದ ದನಿ ಮೊಳಗಿಸಿದರೆಂಬುದು ಕನಕದಾಸರ ಕೆಲವು ಕೀರ್ತನೆಗಳಲ್ಲಿ ತಿಳಿದು ಬರುತ್ತದೆ. ಅಲ್ಲದೆ ಕನಕದಾಸರಲ್ಲಿಯ ಜ್ಞಾನದ ಪರಿಪಕ್ವತೆಯನ್ನು ಹಾಗೂ ಮಠಿಕರ ಅಪರಿಪಕ್ವತೆಯನ್ನು ಕಾಣಬಹುದು.

ಕನಕದಾಸರು ಲೌಕಿಕ ಹಾಗೂ ಆಧ್ಯಾತ್ಮಿಕ ಚಿಂತನೆಗಳೊಂದಿಗೆ ಭಾವೈಕ್ಯ ಸಮಾಜ ಕಟ್ಟುವ ಕೆಲಸವನ್ನು ತಮ್ಮ ಕೀರ್ತನೆಗಳ ಮುಖಾಂತರ ಮಾಡಿದ್ದಾರೆ. ಮನುಷ್ಯ ಸಮಾಜದಲ್ಲಿ ತನ್ನ ಅಜ್ಞಾನದ ಬಲದಿಂದ ನಾನು, ನನ್ನಿಂದ, ನನಗಾಗಿ, ಎಂಬ ಅಹಂಕಾರವನ್ನು ಬೆಳೆಸಿಕೊಂಡಿದ್ದಾನೆ. ಪರರ ಹಿತಚಿಂತನೆ ಮಾಡದೇ ಜಾತಿ-ಮತ-ಪಂಥಗಳ ಲೆಕ್ಕಾಚಾರದೊಂದಿಗೆ ತಾವೇ ಮೇಲು, ಶ್ರೇಷ್ಠರು ಎಂದುಕೊಂಡು ಮೇಲ್ವರ್ಗದವರು ಮೆರೆಯುತ್ತಿದ್ದರು. ದಲಿತರನ್ನು ಶೋಷಿಸುತ್ತ ಅಹಂಕಾರದಿಂದ ಮೆರೆಯುವ ಸಂಪ್ರದಾಯವಾದಿ ಬ್ರಾಹ್ಮಣರ ವಿರುದ್ಧ ಬಂಡೆದ್ದು ಅವರ ಜ್ಞಾನದ ಕಣ್ಣು ತೆರೆಸಲು ಪ್ರಯತ್ನಿಸಿದವರು ಹದಿನಾರನೇ ಶತಮಾನದ ದಲಿತ ವಿಮೋಚಕ ಕನಕದಾಸರು ಮಾತ್ರ.

ನಾನು ನೀನು ಎನ್ನದಿರು ಹೀನ ಮಾನವ
ಜ್ಞಾನದಿಂದ ನಿನ್ನ ನೀನು ತಿಳಿದು ನೋಡೆಲೊ[7]

ಕನಕದಾಸರು ಮನುಷ್ಯನಲ್ಲಿರುವ 'ನಾನು' ಎಂಬ ಅಹಂಕಾರದಿಂದ ಮುಕ್ತರಾಗಲು ಕರೆಕೊಟ್ಟಿದ್ದಾರೆ. 'ನಾನು' ಎನ್ನುವುದು ನರಕಕ್ಕೆ ಸಮನಾಗಿದ್ದು. ನಶ್ವರ ದೇಹದಲ್ಲಿ ಅಡಗಿರುವ ನಾನು ಎಂಬ ಪದ ಕಳೆದು ಹೋದರೆ ಸ್ವರ್ಗದ ಮಾರ್ಗ ಹತ್ತಿರವಾಗುತ್ತದೆ. ನಾನೆಂಬ ಅಹಂಕಾರದ ಕೊಂಡಿಯನ್ನು ಕಳಚಿ ಹಾಕುವ ಕೆಲಸವನ್ನು ಕನಕದಾಸರು ಬಂಡಾಯದ ಮುಖಾಂತರ ಮಾಡಿದರು.

ಮನುಷ್ಯನಾದವನ ಆಸೆ ಆಕಾಂಕ್ಷೆಗಳನ್ನು ಈಡೇರಿಸುವ ಹೆಣ್ಣು-ಹೊನ್ನು-ಮಣ್ಣು, ಅನ್ನ, ಕಾಮ ಕಿವಿಯಿಂದುಸುರುವ ನಾದ ಇತ್ಯಾದಿಗಳೊಂದಿಗೆ ನಿನ್ನನ್ನೇ ಬಿಟ್ಟು ಹೋಗವ ದೇಹವೂ ನಿನ್ನವುಗಳಲ್ಲ. ಇವೆಲ್ಲವೂ ದೇವರ ದೇಣಿಗೆಗಳಾಗಿದ್ದು ಜೀವಿಸಿರುವವರೆಗೆ ಎಲ್ಲವನ್ನು ಭೋಗಿಸಿ ಇಲ್ಲಿಯೇ ಬಿಟ್ಟು ಹೋಗುವುದಾಗಿದೆ. ಅಂಥದ್ದರಲ್ಲಿ ನೀನು, ನಾನು-ನಾನು ಎಂದು ಸೃಷ್ಟಿಕರ್ತನನ್ನೇ ಮರೆತು ಇರುವುದು ಸಮಂಜಸವೆ? ಎಂದು ಕನಕದಾಸರು ಭಗವಂತನನ್ನೇ ಮರೆತು ನಾನು ಎಂಬ ಅಹಂಕಾರದ ಕೋಟೆಯಲ್ಲಿ ಮೆರೆಯುವ ಮನುಷ್ಯನನ್ನುದ್ದೇಶಿಸಿ ಹೇಳಿದ್ದಾರೆ.

ಹೆಣ್ಣು ಹೊನ್ನು ಮಣ್ಣು ಮೂರು ನಿನ್ನದೇನಲೂ
ಅನ್ನದಿಂದ ಬಂದ ಕಾಮ ನಿನ್ನದೇನಲೂ
ಕರ್ಣದಿಂದ ಬರುವ ಘೋಷ ನಿನ್ನದೇನಲೊ
ನಿನ್ನ ಬಿಟ್ಟು ಹೋಹ ದೇಹ ನಿನ್ನದೇನಲೊ[8]

ನಿನ್ನ ದೇಹವೇ ಶಾಶ್ವತವಾಗಿರದಿದ್ದಾಗ ನಿನ್ನಲ್ಲಿ ನಾನು ಎಂಬ ಅಹಂಕಾರದ ನುಡಿ ಉದ್ಭವಿಸುವುದು ಸರಿಯೆ? ಮನುಷ್ಯ ಹಲವು ಜನ್ಮದೊಂದಿಗೆ ಈ ಭೂಮಿಯನ್ನು ಪ್ರವೇಶಿಸಿದ್ದಾನೆ. ಅವನು ಬರುವಾಗ ಅಂಧಕಾರದ ಗುಹೆಯ ಗರ್ಭದಲ್ಲಿ ಇದ್ದು, ಮಲಮೂತ್ರಗಳಲ್ಲಿ ಬಿದ್ದು ಹೊರಳಾಡಿ, ಯೋನಿ ಮಾರ್ಗದಿಂದ ಬಂದಿರುವನಾದ್ದರಿಂದ ಆತನ ಜಾತಿ-ಗೊತ್ರಗಳನ್ನು ಎಣಿಸುವುದು ಸರಿಯಲ್ಲ. ನಾನು ಮೇಲು ನೀನು ಕೀಳು ಎಂಬ ತಾರತಮ್ಯದಿಂದ ಅಮಾನವೀಯತೆ ತೋರಿ ಮಾನವೀಯ ಮೌಲ್ಯಕ್ಕೆ ಧಕ್ಕೆ ತರುವುದು ಸಮಂಜಸವಾದುದಲ್ಲ. ಎಲ್ಲರೂ ಒಂದಾಗಿ ಬಾಳಿ-ಬದುಕಿ ದೇವರ ಕೃಪೆಗೆ ಪಾತ್ರರಾಗಬೇಕೆಂದು ಕನಕದಾಸರು ಕರೆ ಕೊಟ್ಟಿದ್ದಾರೆ:

ಹಲವು ಜನ್ಮದಿಂದ ಬಂದಿರುವನು ನೀನೆಲೊ
ಮಲದ ಗರ್ಭದಲಿ ನಿಂದಿರುವನು ನೀನೆಲೊ
ಜಲದ ದಾರಿಯಲಿ ಬಂದಿರುವನು ನೀನೆಲೊ
ಕುಲವು ಜಾತಿ ಗೋತ್ರವುಳ್ಳವನು ನೀನೆಲೊ[9]

ಕಾಲ ಕರ್ಮ ಶೀಲ ನೇಮ ನಿನ್ನದೇನಲೊ
ಜಾಲವಿದ್ಯೆ ಬಯಲು ಮಾಯೆ ನಿನ್ನದೇನಲೊ
ಕೀಲು ಜಡಿದ ತೊಗಲುಬೊಂಬೆ ನಿನ್ನದೇನಲೋ[10]

ಕನಕದಾಸರು ಮನುಷ್ಯನಲ್ಲಿರುವ 'ನಾನು' ಎಂಬ ಅಹಮ್ಮಿನ ಗುಣದಿಂದ ಮುಕ್ತಿಗೊಳಿಸಲು ಹಲವಾರು ರೀತಿಯ ಪ್ರಶ್ನೆಗಳ ಮುಖಾಂತರ ಪ್ರಯತ್ನಿಸಿರುವುದು ಮಾನವನ ದುರ್ಗುಣಗಳನ್ನು ಬೇರು ಸಹಿತ ಕಿತ್ತೆಸೆಯಲು ಹರಸಾಹಸ ಮಾಡಿದ್ದಾರೆಂಬುದು ಮನವರಿಕೆಯಾಗುತ್ತದೆ.

ಹುಟ್ಟಿದಾತ ಸಾಯಲೇಬೇಕೆಂಬ ಸತ್ಯ ಗೊತ್ತಿದ್ದರೂ ಮನುಷ್ಯ ತನ್ನ ಸಾವಿನ ಬಗ್ಗೆ ಎಳ್ಳಷ್ಟೂ ಚಿಂತಿಸದೆ, ತನ್ನ ಅಹಂಕಾರದಲ್ಲಿ ಮುಳುಗಿ ತಾನೇ ಇಲ್ಲಿ ಶಾಶ್ವತವೆನ್ನುವಂತೆ ವರ್ತಿಸುತ್ತಾನೆ. ಆದರೆ ಅದು ಮನುಷ್ಯನಿಗೆ ತಕ್ಕುದಾದುದಲ್ಲ ಎಂಬುದು ಕನಕದಾಸರ ಅಭಿಪ್ರಾಯ. ಒಂದು ತೊಗಲು ಬೊಂಬೆ ನಿರ್ಜೀವ ಹಾಗೂ ನಿಶ್ಚಲವಾಗಿರುತ್ತದೆ, ಆದರೂ ಅದು ತಾಳಕ್ಕೆ ತಕ್ಕಂತೆ ಕುಣಿಯುತ್ತದೆ. ಕೈ ಕಾಲುಗಳನ್ನು ಹಿಗ್ಗಿಸಿ-ಕುಗ್ಗಿಸಿ ನಟಿಸುತ್ತದೆ. ಇದಕ್ಕೆ ಹಿನ್ನೆಲೆಯಾಗಿ ಸೂತ್ರದಾರನ ಕೈವಾಡವಿರುತ್ತದೆ. ಅದರಂತೆಯೇ ಮನುಷ್ಯನ ಜೀವನದಲ್ಲಿ ವಿಧಿಯೂ ತನ್ನ ಇಷ್ಟದಂತೆ ಆಡಿಸುತ್ತದೆ ಎನ್ನುವುದನ್ನು ಮರೆಯುವಂತಿಲ್ಲ.

ಡಿಂಬದಲ್ಲಿ ಇರುವ ಜೀವ ಕಂಬ ಸೂತ್ರ ಗೊಂಬೆಯಂತೆ
ಎಂದಿಗಿದ್ದರೊಂದು ದಿನ ಸಾವು ತಪ್ಪದು"

ಅಂದರೆ ಮನುಷ್ಯನ ದೇಹದಲ್ಲಿರುವ ಜೀವವೆನ್ನುವುದು ಸೂತ್ರದ ಬೊಂಬೆಯಂತೆ ಕಾಲನ ತಾಳಕ್ಕೆ ತಕ್ಕಂತೆ ಕುಣಿಯುವುದಾಗಿದೆ. ಅದೆಷ್ಟೇ ಸುಖವಾಗಿದ್ದರೂ ಅದಕ್ಕೆ ಸಾವು ಎನ್ನುವುದು ಕಟ್ಟಿಟ್ಟ ಬುತ್ತಿಯಂತೆ. ಇದನರಿಯದ ಮನುಷ್ಯ ತನ್ನ ಜೀವನದ ಸಾರ್ಥಕತೆಯತ್ತ ನಡೆಯದೇ ಮುಕ್ತಿ ಮಾರ್ಗ ಹೊಂದಲಾರ. ಆದ್ದರಿಂದ ಮನುಷ್ಯ ಸಾವು ಹೊಂದುವ ಮೊದಲೇ ಜನರ ಕಷ್ಟ ನಿವಾರಣೆ ಬಯಸಬೇಕು. ಮೇಲು ಕೀಳೆಂಬ ಭಾವನೆ ತೋರದೆ ಇತರರೊಂದಿಗೆ ಬೆರೆತು ಇರಬೇಕೆಂಬುದು ಕನಕದಾಸರ ಆಶಯವಾಗಿದೆ.

ಮನುಷ್ಯ ಹುಟ್ಟಿ ಬರುವಾಗ ತನ್ನದೆನ್ನುವ ಯಾವುದೇ ವಸ್ತುವನ್ನು ಜೊತೆಗೆ ತೆಗೆದುಕೊಂಡು ಬರುವುದಿಲ್ಲ. ಅಲ್ಲದೆ ಸತ್ತ ಮೇಲೂ ತನ್ನದೆನ್ನುವ ಯಾವುದೇ ವಸ್ತುವನ್ನು ಜೊತೆಗೆ ತೆಗೆದುಕೊಂಡು ಹೋಗುವುದಿಲ್ಲ. ಅಂದರೆ ಮಾನವರು ಬರಿಗೈಯಿಂದ ಬಂದು ಬರಿಗೈಯಿಂದಲೇ ಹೋಗುವವರಾಗಿದ್ದಾರೆ. ಬದುಕಿರುವವರೆಗೂ ನಿಸ್ವಾರ್ಥದೊಂದಿಗೆ ಜೀವಿಸಿ ಅಂತಿಮ ದಿನಗಳಲ್ಲಿ ಸರ್ವರಿಗೂ ಪ್ರಿಯರಾಗಿ ಸಾಯಬೇಕು. ಎಷ್ಟೇ ದುರಾಸೆಯಿಂದ ಏನೇ ಗಳಿಸಿದರೂ, ಅದು ಸಂಗಡ ಬಾರದು. ಸತ್ತಾಗ ಬೆಂಕಿಯಲ್ಲಿ ಸುಟ್ಟು ಭಸ್ಮಗೊಳಿಸುವ ದೇಹದಿಂದ ಉಳಿಯುವುದು ಸುಣ್ಣದ ಹರಳಿನಾಕಾರದ ಎಲವುಗಳು ಮಾತ್ರ ಎಂದು ಕನಕದಾಸರು, ದುರಾಶಾವಾದಿಗಳ ಕುರಿತು ಬಂಡಾಯವಾಗಿ ಹೇಳುತ್ತ ಜನರನ್ನು ದುರಾಸೆಯ ಪಾಶದಿಂದ ಮುಕ್ತಗೊಳಿಸಲು ಪ್ರಯತ್ನಿಸಿದ್ದಾರೆ.

ಮನುಷ್ಯನ ಹೊಟ್ಟೆ ಬಹಳ ಕೆಟ್ಟದ್ದು. ಅದನ್ನು ತುಂಬಿಸಲು ಮನುಷ್ಯ ಏನೆಲ್ಲ ಕುಕೃತ್ಯವೆಸಗುತ್ತಾನೆ. ಸುಳ್ಳು ಹೇಳಿ ಜನರನ್ನು ಮೋಸಗೊಳಿಸುತ್ತಾನೆ, ನೂರಾರು ಅಪರಾಧವೆಸಗುತ್ತಾನೆ, ಅಷ್ಟೆಲ್ಲ ಕಷ್ಟ ಪಟ್ಟು ಕೋಟಿಗಟ್ಟಲೆ ಸಂಪತ್ತು ಗಳಿಸುತ್ತಾನೆ, ಆದರೆ ಸತ್ತಾಗ ಗಳಿಸಿದ ಸಿರಿಸಂಪತ್ತು ಬೇರೆ ಇರಲಿ ಒಂದು ಗೇಣು ಬಟ್ಟೆಯನ್ನು ಮೈಮೇಲಿರಿಸದೆ ಬೆತ್ತಲೆಯಾಗಿ, ಬೆಂಕಿಯಲ್ಲಿ ಹಾಕಿ ಸುಟ್ಟು ಬೂದಿಯಾಗುತ್ತಾನೆ. ಮೂರು ದಿನದ ದುಃಖದ ನಾಟಕವಾಡಿ ಬಿಟ್ಟು ಹೋದ ಸಂಪತ್ತನ್ನು ಬಂಧುಗಳು ಅನುಭವಿಸುತ್ತ ಸಂಭ್ರಮಿಸುತ್ತಾರೆ. ಇಂಥ ದೃಶ್ಯಗಳು ಜೀವನದಲ್ಲಿ ನಿರಂತರವಾಗಿ ನಡೆಯುವುದನ್ನು ಕಂಡಿದ್ದರೂ ವಿವೇಕಿಯಾದ ಮನುಷ್ಯನು ಎಚ್ಚರಗೊಳ್ಳದವನಾಗಿದ್ದಾನೆ. ಅವಿವೇಕದ ಅತಿರೇಕಕ್ಕೆ ಒಳಗಾಗಿ ತನ್ನ ಪಾಪ

ಕರ್ಮಗಳನ್ನೆಸಗುತ್ತಿದ್ದಾನೆ. ಇದು ತಪ್ಪು, ಇದರಿಂದ ಮುಕ್ತರಾಗುವಂತೆ ಕನಕದಾಸರು ಉಪದೇಶಿಸಿದ್ದಾರೆ.

ಹುಟ್ಟುತೇನು ತಾರಲಿಲ್ಲ ಸಾಯುತೇನು ಒಯ್ಯಲಿಲ್ಲ
ಸುಟ್ಟು ಸುಟ್ಟು ಸುಣ್ಣದ ಹರಳಾಯಿತೀ ದೇಹ
ಹೊಟ್ಟೆ ಭಾಳ ಕೆಟ್ಟದೆಂದು ಎಷ್ಟು ಕಷ್ಟ ಪಟ್ಟರೂನು
ಬಿಟ್ಟು ಹೋಗುವಾಗ ಗೇಣು ಬಟ್ಟೆ ಕಾಣದು[12]

ಹತ್ತು ಎಂಟು ಲಕ್ಷ ಗಳಿಸಿ ಮತ್ತೆ ಸಾಲದೆಂದು ಪರರ
ಅರ್ಥಕ್ಕಾಗಿ ಆಸೆ ಪಟ್ಟು ಸುಳ್ಳು ನ್ಯಾಯ ಮಾಡ್ವರು
ಬಿತ್ತಿ ಬೆಳೆದು ತನ್ನದೆಂಬ ವ್ಯರ್ಥಚಿಂತೆಯನ್ನು ಮಾಡೆ
ಸತ್ತು ಹೋದ ಮೇಲೆ ಅರ್ಥ ಯಾರಿಗಾಹುದೂ[13]

ದುರಾಸೆಯ ಸೆಲೆಯಲ್ಲಿ ಸಿಲುಕಿದ ಮನುಷ್ಯನಿಗೆ ಎಷ್ಟು ಕೊಟ್ಟರೂ ಸಾಕಾಗಲಾರದು. ಲಕ್ಷಗಟ್ಟಲೆ ಸಂಪಾದಿಸಿದರೂ ತೃಪ್ತಿಗೊಳ್ಳದ ಜನರು ಅಮಾಯಕರ ಜೊತೆ ಜಗಳ ಕಾಯುತ್ತ ಅವರಲ್ಲಿಯ ಹಣ ವಸ್ತು, ಒಡವೆಗಳನ್ನು ಬಲವಂತವಾಗಿ ಕಿತ್ತುಕೊಂಡು ಅಕ್ರಮ ಸಂಪಾದನೆಗೆ ಮನಸ್ಸು ಮಾಡುವುದರೊಂದಿಗೆ ತಮ್ಮ ಸ್ವಾರ್ಥ ಬಗೆಯುವ ಜನರನ್ನು ಕನಕದಾಸರು ಮೆಚ್ಚದವರಾಗಿದ್ದಾರೆ. ಹೊಲ ಗದ್ದೆಗಳಲ್ಲಿ ಬಿತ್ತಿ ಬೆಳೆದು ಹಗಲಿರುಳು ಅದರ ಬೆನ್ನು ಹತ್ತಿ ನನ್ನದೆಂಬ ವ್ಯರ್ಥ ಚಿಂತೆಯೊಂದಿಗೆ ಒಂದು ದಿನ ಸತ್ತು ಹೋಗುತ್ತಾರೆ. ತಾವು ಗಳಿಸಿದ ಹಣ ಆಸ್ತಿ ಅಂತಸ್ತುಗಳು ಹೆರವರ ಪಾಲಾಗುವಾಗ ಅವುಗಳನ್ನು ಗಳಿಸಿಯೂ ವ್ಯರ್ಥವಾಗುತ್ತದೆ. ಭಗವಂತನು ಕರುಣಿಸಿದ ಅಲ್ಪ ಸಂಪತ್ತಿನಲ್ಲಿ ತೃಪ್ತಗೊಂಡು ಹಾಯಾಗಿರಬೇಕು. ಹಿಂಸೆಯಿಂದ ಗಳಿಸಿದ ಸಂಪತ್ತು ಪ್ರಾಯಶ್ಚಿತ್ತಕ್ಕೆ ಕಾರಣವಾಗುತ್ತದೆ ಎಂದಿದ್ದಾರೆ. ಜೀವಂತವಿರುವಾಗ ಹೆಣ್ಣು, ಹೊನ್ನು, ಮಣ್ಣು ತನ್ನಲ್ಲಿಯೇ ಇದ್ದರೂ ಅವುಗಳನ್ನು ಭೋಗಿಸುವ ಭಾಗ್ಯ ಪಡೆಯದವರು ಅಭಾಗ್ಯರು. ಇದ್ದಾಗ ಅಣ್ಣ-ತಮ್ಮ, ತಾಯಿ-ತಂದೆ, ಬಂಧು-ಬಳಗದವರಿಗೆ ಸಹಾಯ ಮಾಡದೇ ತನ್ನಲ್ಲೇ ತಾನಾಗಿ ಪರಹಿತ ಬಯಸದವರು ನಿರ್ದಯಿಗಳಾಗುತ್ತಾರೆ. ಕೈಯಲ್ಲಿ ಹಣವಿದ್ದರೂ ಮೃಷ್ಟಾನ ಭೋಜನ ಮಾಡದೆ, ಒಳ್ಳೆಯ ಬಟ್ಟೆ ತೊಡದೆ, ತಮ್ಮ ಸುಖವನ್ನು ತಾವೇ ಅನುಭವಿಸದವರು ಸತ್ತ ಮೇಲೆ ಇನ್ನೇನು ಸುಖ ಕಾಣುತ್ತಾರೆ? ಎಂದು ಕನಕದಾಸರು ಜನರನ್ನುದ್ದೇಶಿಸಿ ಕೆಳಗಿನಂತೆ ಮಾರ್ಮಿಕವಾಗಿ ನುಡಿದಿದ್ದಾರೆ:

ಹೊನ್ನು ಹೆಣ್ಣು ಮಣ್ಣು ಮೂರು ತನ್ನಲ್ಲಿದ್ದು ಉಣ್ಣಲಿಲ್ಲ
ಅಣ್ಣ ತಮ್ಮ ತಾಯಿ ತಂದೆ ಬಯಸಲಾಗದು
ಅನ್ನ ವಸ್ತ್ರ ಭೋಗಕಾದಿ ತನ್ನ ಸುಖವ ಕಾಣಲಿಲ್ಲ
ಮಣ್ಣು ಪಾಲು ಆದ ಮೇಲೆ ಯಾರಿಗಾಹುದೊ[14]

ಕನಕದಾಸರು ಮಾನವ ಜನ್ಮದದಲ್ಲಿ ಅನುಭವಿಸಬೇಕಾದ ಸುಖದ ಕುರಿತು ವಿವರಿಸುತ್ತ ಐಷಾರಾಮಿ ಜೀವನ ನಡೆಸುವವರ ವಿರುದ್ಧ ಸಿಡಿದೆದ್ದಿದ್ದಾರೆ.

ವಾರ್ತೆ ಕೀರ್ತಿಯೆಂಬುವೆರಡು ಸತ್ತ ಮೇಲೆ ಬಂದವಯ್ಯ[15]

ಕನಕದಾಸರ ಈ ಉಕ್ತಿಯಂತೆ ಜೀವಂತವಿದ್ದಾಗ ಯಾವುದೇ ಮನುಷ್ಯನಾಗಿರಲಿ ಒಳ್ಳೆಯ ಕೆಲಸ ಮಾಡಬೇಕು. ಯಾರು ಜನರ ಸಂಕಷ್ಟಗಳಿಗೆ ಸ್ಪಂದಿಸಿ ಪರೋಪಕಾರ ಮನೋಭಾವನೆ ಮೆರೆಸುವನೋ ಅಂಥ ಮನುಷ್ಯ ಸಮಾಜದ ಸತ್ಕೀರ್ತಿಗೆ ಪಾತ್ರನಾಗುತ್ತಾನೆ. ಇಲ್ಲದಿದ್ದರೆ ಅಪಕೀರ್ತಿಗೆ ಪಾತ್ರನಾಗಿ ಅವನು ಕ್ರಮೇಣ ನಾಮಾವಶೇಷನಾಗುತ್ತಾನೆ. ಆದ್ದರಿಂದ ಎಲ್ಲರೂ ಸಮಾಜದಲ್ಲಿ ಪರಸ್ಪರರಲ್ಲಿ ಒಳಿತಿನ ಕುರಿತಾದ ಭಾವನೆ ಹೊಂದಬೇಕೆಂದು ಕನಕದಾಸರು ಹೇಳಿರುವುದು, ಇದ್ದಾಗ ಇಲ್ಲದವರಿಗೆ ನೀಡುವ ಸದ್ಗುಣಿಗಳು ಸತ್ತ ಮೇಲೂ ಜನರ ಕೀರ್ತಿಗೆ ಪಾತ್ರರಾಗುತ್ತಾರೆ ಎಂಬುದಾಗಿದೆ.

ಕನಕದಾಸರ ವಿಚಾರದಂತೆ ಜೀವನವೆಂಬುದು ನೀರ ಮೇಲಿನ ಗುಳ್ಳೆಯಂತೆ ಸ್ಥಿರವಾದುದಲ್ಲ. ಹುಟ್ಟು-ಸಾವುಗಳ ಮಧ್ಯೆ ಈ ಜಗತ್ತಿನಲ್ಲಿ ಸತ್ಯತನದೊಂದಿಗೆ ಜೀವನ ನಡೆಸಬೇಕು. ಆಸ್ತಿ-ಅಂತಸ್ತುಗಳು ಸ್ಥಿರವಾದವುಗಳಲ್ಲ, ತನ್ನಲ್ಲಿ ಇದ್ದಾಗ ಕರೆದು ಇಲ್ಲದವರಿಗೆ ಕೊಡಬೇಕು. ಇತರರ ಸಂಕಷ್ಟ ಹಿಂಗಿಸಲು ಪ್ರಯತ್ನಿಸಿದಾತನು ಸತ್ತ ಮೇಲೂ ತನ್ನ ಹೆಸರನ್ನು ಈ ಜಗತ್ತಿನಲ್ಲಿ ಶಾಶ್ವತವಾಗಿ ಉಳಿಸಿಕೊಳ್ಳಲು ಪ್ರಯತ್ನಿಸಬೇಕು. ಎಂಬ ಮಾತನ್ನು ಉಳ್ಳವರು ಹಾಗೂ ಮಡಿವಂತರನ್ನು ಕುರಿತು ಹೇಳಿದ್ದಾರೆ. ಪಾಂಡಿತ್ಯದ ನೆಪ ಮಾಡಿಕೊಂಡು ಸಾಮಾನ್ಯರು ಹಾಗೂ ದಲಿತರಲ್ಲಿ ಮೌಢ್ಯತೆ ಸೃಷ್ಟಿಸಿ ಹಣ ಕೀಳುವ ಕೆಲಸದಲ್ಲಿ ತೊಡಗಿದ್ದ ದುರಹಂಕಾರಿಗಳನ್ನು ಖಂಡಿಸಿದ್ದಾರೆ. ಅಕ್ರಮ ಸಂಪತ್ತುಳ್ಳವರನ್ನು ಪಾಪ ಪ್ರಜ್ಞೆಯಿಂದ ಮುಕ್ತಗೊಳಿಸಲು ಚಿಂತಿಸಿರುವ ವಿಷಯ ಕನಕದಾಸರ ಬಂಡಾಯದ ಕ್ರಮದಲ್ಲಿ ಅಡಕವಾಗಿದೆ.

ರೈತರ ಶ್ರಮದ ಸಂಪತ್ತನ್ನು ಮೇಲ್ವರ್ಗದವರು ಉಪಾಯದಿಂದ ಕಬಳಿಸುತ್ತಿದ್ದರು, ಅಂದಿನ ಬಹುಸಂಖ್ಯಾತ ಬ್ರಾಹ್ಮಣರು ನಿಯತ್ತಿನಿಂದ ದುಡಿದು ಗಳಿಸುತ್ತಿರಲಿಲ್ಲ. ಬ್ರಾಹ್ಮಣೇತರರ ಮಧ್ಯೆ ಜಗಳ ಹುಟ್ಟಿಸಿ ಹಣದಾಸೆಗಾಗಿ ಸುಳ್ಳು ನ್ಯಾಯ ಹೇಳಿ ಅಮಾಯಕರಿಗೆ ಅನ್ಯಾಯವೆಸಗುವ ದೃಶ್ಯಗಳನ್ನು ಕಂಡ ಕನಕದಾಸರು ಮರುಗಿದ್ದಾರೆ. ವಿವೇಕಿಗಳು ಅವಿವೇಕದ ಕೆಲಸ ಮಾಡುವುದಾದರೆ ಸಮಾಜದಲ್ಲಿ ವಿವೇಕತೆಗೆ ಬೆಲೆ ಎಲ್ಲಿದೆ? ಎಂದು ಪ್ರಶ್ನಿಸಿ ಅವಿವೇಕದಿಂದ ನಡೆದುಕೊಳ್ಳುತ್ತಿದ್ದ ಸಮಾಜದ ಮೇಲ್ವರ್ಗದ ಜನರ ತಪ್ಪನ್ನು ತಿದ್ದುವಲ್ಲಿ ಶ್ರಮಿಸಿದರು. ನ್ಯಾಯಯುತವಾಗಿ ಜನರ ಸಮಸ್ಯೆಗಳನ್ನು ಬಗೆಹರಿಸಲು ವಿವೇಕಿಗಳು ಮುಂದಾಗಬೇಕೆಂದರು.

048948

'ಹುಟ್ಟಿಸಿದ ದೇವರು ಹುಲ್ಲು ಮೇಯಿಸದಿರಲಾರ' ಎಂಬ ಗಾದೆ ಮಾತಿನಂತೆ. ಮನುಷ್ಯನನ್ನಾಗಿ ಹುಟ್ಟಿಸಿದ ದೇವರು ಆತನ ಅನ್ನದ ವ್ಯವಸ್ಥೆಯನ್ನೂ ಅವನೇ ಮಾಡುವವನಾಗಿದ್ದಾನೆ. ಆದರೆ ಮನುಷ್ಯನಲ್ಲಿ ತಾಳ್ಮೆ ಇರಬೇಕಾದುದು ಅತೀ ಅವಶ್ಯ. ತಾಳ್ಮೆಯಿಂದ ಇರದ ಜನರು ಪರಮಾತ್ಮನಿಂದ ದೂರವಾಗುತ್ತಾರೆ ಎಂಬ ಸತ್ಯವನ್ನೂ ಅರುಹಿದ್ದಾರೆ. ತಾಳ್ಮೆಯಲ್ಲಿ ಸಕಲ ಸಿದ್ಧಿಯೂ ಇದೆ ಎಂಬುದು ಕನಕದಾಸರ ಅಭಿಮತವಾಗಿದೆ. ಹಪಹಪಿಯ ಜೀವನ ನಡೆಸಲೆತ್ನಿಸುವ ಸಮಾಜದ ಜನರಿಗೆ ತಾಳ್ಮೆಯ ಪಾಠ ಹೇಳಿ ಕೀರ್ತನೆಯ

ಮುಖಾಂತರ ವಿವಿಧ ಜೀವರಾಶಿಗಳನ್ನು ಸಲುಹುವ ಭಗವಂತನ ಹಿರಿತನವನ್ನು ಕೊಂಡಾಡಿದ್ದಾರೆ. ಮಾನವ ಹಾಗೂ ಇತರ ಜೀವಿಗಳಿಗೆ ಭಗವಂತನೇ ಅನ್ನದಾತನಾಗಿದ್ದು ಅದನ್ನು ಪಡೆಯಲು ತಾಳ್ಮೆಯಿಂದ ನಿರೀಕ್ಷಿಸಬೇಕೆಂದು ಕನಕದಾಸರು ಹೇಳಿದ್ದಾರೆ. ಬೆಟ್ಟ-ಗುಡ್ಡಗಳ ಮೇಲೆ ಗಿಡ ಮರಗಳು ಹುಲುಸಾಗಿ ಬೆಳೆಯಲು ಕಟ್ಟೆಯನ್ನು ಕಟ್ಟಿ ನೀರೆರೆದವರು ಯಾರು? ಅದು ಮನುಷ್ಯನಿಂದ ಸಾಧ್ಯವೆ? ಆದ್ದರಿಂದ ಮನುಷ್ಯನಾದವನು ತಹತಹಿಸಿ ಬದುಕುವುದು ಸರಿಯಲ್ಲ. ತಾಳ್ಮೆಯಿಂದ ಭಗವಂತನಿಂದ ಎಲ್ಲವನ್ನೂ ಪಡೆಯಬಹುದು:

ತಲ್ಲಣಿಸದಿರು ಕಂಡ್ಯ ತಾಳು ಮನವೆ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ

ಬೆಟ್ಟದಾ ತುದಿಯಲ್ಲಿ ಹುಟ್ಟಿದ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾಗಿರಲು
ಗಟ್ಯಾಗಿ ಸಲಹುವನು ಇದಕೆ ಸಂಶಯವಿಲ್ಲ[16]

ಅಡವಿಯಲ್ಲಿರುವ ಮೃಗ ಪಕ್ಷಿಗಳಿಗೆಲ್ಲ ಅಲ್ಲಲ್ಲಿ ಆಹಾರವಿತ್ತವನು ಹರಿಯೇ ಆಗಿದ್ದಾನೆ ಯಾವ ತಾಯಿ ತನ್ನ ಕಂದನ ಪಾಲನೆಗೆ ಹೊಣೆ ಹೊತ್ತಿರುವಳೋ ಅದೇ ತೆರನಾಗಿ ಹರಿಯೂ ಕೂಡ ತಾನು ಹುಟ್ಟಿಸಿದ ಸಕಲ ಜೀವಿಗಳ ರಕ್ಷಣೆಯ ಹೊಣೆಯನ್ನು ಹೊತ್ತಿರುವವನಾದ್ದರಿಂದ ಅಹೋರಾತ್ರಿ ಅವನು ಎಲ್ಲರನ್ನೂ ರಕ್ಷಿಸುವುದರಲ್ಲಿ ಸಂಶಯವಿಲ್ಲ. ಕಲ್ಲಿನಲ್ಲಿ ಹುಟ್ಟಿ ಬೆಳೆದ ಕಪ್ಪೆ ಹೊರಗೆ ಬಾರದೆ ಅಲ್ಲಿಯೇ ಕೂಗಿಕೊಳ್ಳುತ್ತಿರುತ್ತದೆ ಅದಕ್ಕೆ ಆಹಾರವನ್ನು ಒದಗಿಸುವವರು ಯಾರೆಂಬ ಪ್ರಶ್ನೆಗೆ ಉತ್ತರ ಭಗವಂತನೆಂದೇ ಆಗುತ್ತದೆ. ಹೀಗೆಯೇ ಎಲ್ಲ ರೀತಿಯ ಜೀವಿಗಳನ್ನು ಸಂರಕ್ಷಿಸುವ ಹೊಣೆ ಭಗವಂತನದಾಗಿದೆ. ಇವೆಲ್ಲವನ್ನೂ ಅರಿಯುವ ಮನುಷ್ಯ ತನ್ನ ಜೀವನದಲ್ಲಿ ತಾಳ್ಮೆಯಿಂದ ವರ್ತಿಸದೆ ನಾನು ಮೊದಲು ನನಗೆ ಮೊದಲು ಎಂದು ಹಪ ಹಪಿಸಿ ಆತುರಕ್ಕೊಳಗಾಗುತ್ತಾನೆ. ಕಳವಳ ವ್ಯಕ್ತಪಡಿಸುವ ಮನುಷ್ಯನನ್ನು ಕುರಿತು ಕೀರ್ತನೆಗಳ ಮುಖಾಂತರ ಭರವಸೆಯ ನುಡಿಗಳನ್ನಾಡಿ ಕನಕರು ತಾಳ್ಮೆಯಿಂದ ಇದ್ದು ಭಗವಂತನಿಗೆ ಪ್ರಿಯರಾಗಬೇಕೆಂದಿದ್ದಾರೆ.

ಕಲ್ಲಿನಲ್ಲಿ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ
ಅಲ್ಲಲ್ಲಿಗಾಹಾರ ತಂದೀವರಾರು
ಬಲ್ಲಿದನು ಕಾಗಿನೆಲೆಯಾದಿಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ[17]

ಈ ಕೀರ್ತನ ಭಾಗದಲ್ಲಿ ಕನಕದಾಸರ ವಿಚಾರಧಾರೆಗಳನ್ನು ಗುರುತಿಸುವುದಾದರೆ, ದೇವರು ಸಕಲ ಜೀವಿಗಳ ರಕ್ಷಕನಾಗಿದ್ದು ಆತನ ಕೊಡುಗೆಗಳು ಅಪಾರವಾಗಿವೆ. ದೇವರಿಂದ

ಸಕಲವನ್ನೂ ಪಡೆಯುವ ಮನುಷ್ಯನಲ್ಲಿ ಆತನ ಪ್ರತಿಯಾಗಿ ಭಕ್ತಿ ಆರಾಧನೆಯೇ ಇಲ್ಲದಂತಾಗಿದೆ. ದೇವರು ನಮಗೆ ಏನು ಮಾಡಿದ್ದಾನೆ? ಏನು ಕೊಟ್ಟಿದ್ದಾನೆ? ಎಂಬ ಪ್ರಶ್ನೆಗಳೊಂದಿಗೆ ದೇವರನ್ನು ದೂರುವುದು ಸರಿಯಲ್ಲ. ಸಕಲ ಇಷ್ಟಾರ್ಥಗಳನ್ನು ದೇವರಿಂದ ಭಕ್ತಿಯಿಂದ ಪಡೆಯುವ ಕಳಕಳಿ ಇಲ್ಲದಿರುವುದನ್ನು ಕನಕದಾಸರು ಪ್ರತ್ಯಕ್ಷ ಕಂಡು ನೊಂದಿದ್ದಾರೆ. ದೇವರು ಸಕಲ ಜೀವಾತ್ಮರನ್ನು ರಕ್ಷಿಸುವುದರೊಂದಿಗೆ ಮನುಷ್ಯರಾದ ನಮ್ಮನ್ನೂ ರಕ್ಷಿಸುತ್ತಾನೆ. ಪ್ರಾಣಿಗಳಿಗೆ, ಪಕ್ಷಿಗಳಿಗೆ, ಜಲಚರಗಳಿಗೆ ಆಹಾರ ಬೇಡುವ ಬುದ್ಧಿ ಇಲ್ಲದಿದ್ದರೂ ಅವುಗಳಿಗೆ ಅಲ್ಲಲ್ಲಿ ಆಹಾರವನ್ನಿತ್ತು ಸಂರಕ್ಷಿಸುತ್ತಿದ್ದಾನೆ. ಬುದ್ಧಿಜೀವಿಗಳಾದ ಮನುಷ್ಯರೂ ದೇವರಿಂದಲೇ ರಕ್ಷಿಸಲ್ಪಟ್ಟವರಾಗಿದ್ದು ಆತನ ಭಕ್ತಿಗೆ ಪಾತ್ರರಾಗಿ ಆತನಲ್ಲಿ ಲೀನವಾಗುವ ಆತುರ ಹೊಂದಬೇಕು. ಆತನ ಒಲುಮೆಗೆ ಪಾತ್ರರಾದವರನ್ನು ಆದಿಕೇಶವನು ಅಹೋರಾತ್ರಿ ಸಲಹುವನು ಇದಕ್ಕೆ ಸಂಶಯವಿಲ್ಲವೆಂಬ ವಿಚಾರ ವ್ಯಕ್ತ ಪಡಿಸಿದ್ದಾರೆ.

ಮನುಷ್ಯ ತನ್ನ ಹೆಂಡತಿ ಮಕ್ಕಳಿಗಾಗಿ ಒಡವೆ ವಸ್ತುಗಳನ್ನು ಸಂಗ್ರಹಿಸಿಡುತ್ತಾನೆ, ಆದರೆ ಹಸಿದು ಬಂದವನಿಗೆ ಹಿಡಿ ಅನ್ನವನಿಕ್ಕದೇ ಆತನನ್ನು ಮುಂದೆ ಹೋಗಲು ಹೇಳುತ್ತಾನೆ. ಪರರ ಹಸಿವಿನ ಬಗ್ಗೆ ಕಿಂಚಿತ್ತೂ ಚಿಂತಿಸದೇ ನಿರ್ದಯನಾಗುತ್ತಾನೆ. ತನ್ನ ಸ್ವಾರ್ಥ ಬಯಸುವವನು ಸತ್ತ ಮೇಲೆ ಸತ್‌ಕೀರ್ತಿಗೆ ಪಾತ್ರನಾಗಲಾರ. ಹೆಂಡಿರು ಮಕ್ಕಳು ತಾನು ಸಾಯುವ ಸಮಯದಲ್ಲಿ ಯಮನ ಪಾಶದಿಂದ ಬಿಡಿಸಿಕೊಳ್ಳಲು ಅನರ್ಹರಾಗುತ್ತಾರೆ. ಆ ಸಮಯದಲ್ಲಿ ಅವರು ಧರಿಸುವ ವಸ್ತ್ರ-ಒಡವೆಗಳು ಜೊತೆಗೆ ಬರಲಾರವು ಎಂಬುದನ್ನು ಕನಕದಾಸರು ಪರಿಚಯಿಸಿದ್ದಾರೆ.

ನುಡಿ ನಡೆವ ಕಾಲದಲಿ ದಾನ ಮಾಡದೆ ಇರಲು
ಅಡವಿಯೊಳು ಕೆರೆ ತುಂಬಿ ಬತ್ತಿದಂತೆ
ಮಡದಿ ಮಕ್ಕಳಿಗೆಂದು ಒಡವೆ ವಸ್ತ್ರವ ಗಳಿಸೆ
ಹಿಡಿಯಲಾ ಯಮನವರ ಕಟ್ಟಿಗ್ಗೊಳಗಾಗಿ[18]

ಚಳಿ-ಮಳೆಯನ್ನದೆ ಅರ್ಧ ರಾತ್ರಿಯ ಕಾರ್ಗತ್ತಲಲ್ಲಿ ಎದ್ದು ಹೊಳೆಯಲ್ಲಿ ಮುಳುಗಿ ಜಪ ತಪವ ಮಾಡಿ ಕಳವಳಗೊಂಡು ನೂರೆಂಟು ತೊಂದರೆಗಳನ್ನು ಅನುಭವಿಸಿ ಬಳಲುವುದಕ್ಕಿಂತ ಶುದ್ಧ ಮನಸ್ಸಿನಿಂದ ಆದಿಕೇಶವನನ್ನು ನೆನೆದರೆ ಮನುಷ್ಯನ ಇಷ್ಟಾರ್ಥಗಳು ಈಡೇರಲು ಸಾಧ್ಯ. ಕಪಟತನದೊಂದಿಗೆ ನೇಮ-ನಿಷ್ಠೆ, ಜಪ-ತಪಗಳಲ್ಲಿ ವ್ಯರ್ಥ ಕಾಲಹರಣ ಮಾಡುವ ಮಡಿವಂತ ಕರ್ಮಠ ಬ್ರಾಹ್ಮಣರ ವಿರುದ್ಧ ಬಂಡಾಯದ ನುಡಿಗಳನ್ನಾಡಿದ್ದಾರೆ ಕನಕದಾಸರು.

ಚಳಿಮಳೆಯ ಅತಿ ಕಾರುಗತ್ತಲೆಯೊಳಗೆ ಎದ್ದು
ಹೊಳೆಯೊಳಗೆ ಮುಳುಗಿ ಜಪ ತಪವ ಮಾಡಿ
ಕಳವಳಿಸಿ ನೂರೆಂಟು ಹಲುಬಿ ಬಳಲಲು ಬೇಡ
ನಳಿನಾಕ್ಷ ಆದಿಕೇಶವನ ನೆನೆಮನವೆ[19]

ದೃಢಭಕ್ತಿ ಹೊಂದದೇ ಹರಿಗೆ ವಂಚನೆಗೈಯುತ್ತಿದ್ದ ಕರ್ಮಠರನ್ನು ಖಂಡಿಸುತ್ತಾ ಭಗವಂತನ ನೈಜ ಆರಾಧನೆಯತ್ತ ಸೆಳೆಯಲು ಕನಕದಾಸರು ಪ್ರಯತ್ನಿಸಿದ್ದಾರೆ. ಅಂದರೆ ಕೆಳವರ್ಗದವರ ಭಕ್ತಿ ಭಗವಂತನಿಗೆ ಸಲ್ಲುವುದಿಲ್ಲ ಎನ್ನುವ ಮೇಲ್ವರ್ಗದವರಿಗೆ ಶೂದ್ರ ಕನಕದಾಸರು ಭಕ್ತಿಯ ನೈಜ ಮಾರ್ಗ ತೋರಿದುದು ವಿಶೇಷ.

**ಕೊನೆ ಟಿಪ್ಪಣಿಗಳು:**

1. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 27, ಪುಟ 97, ಪ್ರೊ. ಸುಧಾಕರ.
2. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 30, ಪುಟ 103, ಪ್ರೊ. ಸುಧಾಕರ.
3. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 30, ಪುಟ 103, ಪ್ರೊ. ಸುಧಾಕರ.
4. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 30, ಪುಟ 103, ಪ್ರೊ. ಸುಧಾಕರ.
5. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 57, ಪುಟ 51, ಪ್ರೊ. ಸುಧಾಕರ.
6. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 57, ಪುಟ 51, ಪ್ರೊ. ಸುಧಾಕರ.
7. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 89, ಪುಟ 200, ಪ್ರೊ. ಸುಧಾಕರ.
8. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 89, ಪುಟ 200, ಪ್ರೊ. ಸುಧಾಕರ.
9. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 89, ಪುಟ 200, ಪ್ರೊ. ಸುಧಾಕರ.
10. ಕನಕ ಸಾಹಿತ್ಯ ದರ್ಶನ 4, ಕೀರ್ತನೆ 89, ಪುಟ 200, ಪ್ರೊ. ಸುಧಾಕರ.
11. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 112, ಪುಟ 103,104, ಪ್ರೊ. ಸುಧಾಕರ.
12. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 112, ಪುಟ 103,104, ಪ್ರೊ. ಸುಧಾಕರ.
13. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 112, ಪುಟ 103, ಪ್ರೊ. ಸುಧಾಕರ.
14. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 112, ಪುಟ 103, ಪ್ರೊ. ಸುಧಾಕರ.
15. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 112, ಪುಟ 103, ಪ್ರೊ. ಸುಧಾಕರ.
16. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 114, ಪುಟ 105, ಪ್ರೊ. ಸುಧಾಕರ.
17. ಸಮಗ್ರ ದಾಸ ಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 114, ಪುಟ 105, ಪ್ರೊ. ಸುಧಾಕರ.
18. ಸಮಗ್ರ ದಾಸ ಸಾಹಿತ್ಯ: ಸಂಪುಟ 5, ಭಾಗ 1, ಕೀರ್ತನೆ 111, ಪುಟ 103, ಪ್ರೊ. ಸುಧಾಕರ.
19. ಸಮಗ್ರ ದಾಸ ಸಾಹಿತ್ಯ: ಸಂಪುಟ 5, ಭಾಗ 1, ಕೀರ್ತನೆ 111, ಪುಟ 103, ಪ್ರೊ. ಸುಧಾಕರ.

***

## ಅಧ್ಯಾಯ 5

# ರಾಮಧಾನ್ಯ ಚರಿತೆಯಲ್ಲಿ ಬಂಡಾಯದ ದನಿ

ಹರಿದಾಸ ಪರಂಪರೆಯ ಮತ್ತು ದಾಸ ಸಾಹಿತ್ಯದ ಅವಿಸ್ಮರಣೀಯರಲ್ಲೊಬ್ಬರಾದ ಕವಿ, ಸಂತ, ಸಮಾಜ ಸುಧಾರಕ, ದಲಿತ ಬಂಡಾಯಗಾರ ಕನಕದಾಸರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮದೇ ಆದ ಸ್ಥಾನಮಾನವನ್ನು ಹೊಂದಿದ್ದಾರೆ. ಹದಿನಾರನೆಯ ಶತಮಾನದಲ್ಲಿ ದಲಿತರನ್ನು ಶೋಷಣೆಗೊಳಪಡಿಸಿ ತಮ್ಮ ದುರಭಿಮಾನದಿಂದ ಬೀಗುತ್ತಿದ್ದ ವೈದಿಕ ಸಮುದಾಯದ ವಿರುದ್ಧ ಕ್ರಾಂತಿಯ ಕಹಳೆಯನ್ನು ಮೊಳಗಿಸಿದ ಏಕಮೇವ ದಲಿತ ಬಂಡಾಯದ ಹರಿಕಾರ ಕನಕದಾಸರಾಗಿದ್ದಾರೆ. ವಿಜಯನಗರ ಸಾಮ್ರಾಜ್ಯದಲ್ಲಿ ಮಾಂಡಲೀಕನಾಗಿ, ಸೇನಾಧಿಪತಿಯಾಗಿ ಅಧಿಕಾರ ನಡೆಸಿ ದಾಸರಾದ ಮೇಲೆ ನೊಂದವರ, ಹಿಂದುಳಿದವರ, ದಲಿತರ ಮೇಲೆ ಕರುಣಾಜನಕ ದೃಷ್ಟಿಬೀರಿ ತಮ್ಮ ಹೃದಯ ಶ್ರೀಮಂತಿಕೆ ಮೆರೆಸಿದವರಾಗಿದ್ದಾರೆ.

ಕನಕದಾಸರು ಬಾಲ್ಯದಿಂದಲೂ ಬಾಡದ ಆದಿಕೇಶವನ ಭಕ್ತರಾಗಿದ್ದರು. ಸಮರದಲ್ಲಿ ಶತ್ರುಗಳೊಂದಿಗೆ ಕಾದಾಡಿ ಹಿಂಸಾತ್ಮಕ ಸಾವು ನೋವುಗಳನ್ನು ಕಣ್ಣಾರೆ ಕಂಡು ಮನನೊಂದು ಬೆಂದು ಒಬ್ಬನನ್ನು ಸಾಯಿಸುವುದು ಸುಲಭದ ಮಾತಾದರೂ ಸತ್ತವನಿಗೆ ಮತ್ತೆ ಜೀವ ತುಂಬುವ ಯೋಗ್ಯತೆ ನನ್ನಲ್ಲಿದೆಯೆ? ಎಂಬ ತಮ್ಮ ಸ್ವಗತ ಪ್ರಶ್ನೆಗೆ ಉತ್ತರ ಹುಡುಕುವ ನಿಟ್ಟಿನತ್ತ ಕನಕದಾಸರು ಮುಖ ಮಾಡುತ್ತಾರೆ. ತಮ್ಮ ಸಕಲೈಶ್ವರ್ಯವನ್ನೆಲ್ಲ ತ್ಯಜಿಸಿ ಭಗವಂತನ ಸಾಕ್ಷಾತ್ಕಾರದೆಡೆಗೆ ತೆರಳುತ್ತಾರೆ. ತಮಗೆ ಸಿಕ್ಕ ಕನಕ ರತ್ನಗಳನ್ನು ತಿರಸ್ಕರಿಸಿ ತಮ್ಮ ಸುಖಕ್ಕಾಗಿ ಎಳ್ಳಷ್ಟೂ ಇಟ್ಟುಕೊಳ್ಳದೆ ನಿರ್ಗತಿಕರಿಗೆ ಬಡವರಿಗೆ ಹಂಚುತ್ತಾರೆ. ಗುಡಿ ಗೋಪುರಗಳನ್ನು ಕಟ್ಟಿಸಿ ತಮ್ಮ ನಿಸ್ವಾರ್ಥತೆ ಮೆರೆಸಿ ಸಮಾಜದಲ್ಲಿ ಕನಕದಾಸಗೆ ಬೀಳದೆ ಕನಕ ಗುಣಗಳನ್ನು ಪ್ರದರ್ಶಿಸಿದ ತಿಮ್ಮಪ್ಪ ಜನ ಮನದಲ್ಲಿ ಬೆಲೆ ಕಟ್ಟಲಾಗದ ಕನಕದ ಖಣಿಯಾಗಿ ಕನಕಪ್ಪನಾಯಕನಾಗುತ್ತಾರೆ. ವ್ಯಾಸರಾಯ, ತಾತಾಚಾರ್ಯ, ವಾದಿರಾಜರಿಂದ ಮೋಕ್ಷ ಮಾರ್ಗದ ಸೂಕ್ಷ್ಮತೆಯನ್ನು ಅಭ್ಯಸಿಸಿ ಜ್ಞಾನದ ಭಂಡಾರವೇ ಆಗುತ್ತಾರೆ. ಯಾವ ಜಾತಿ, ಮತ ಪಂಥಗಳಿಗೆ ಅಂಟಿಕೊಳ್ಳದೆ, ಯಾವ ಮತಧರ್ಮವನ್ನು ದ್ವೇಷಿಸದೆ

ಆತ್ಮೋದ್ಧಾರದ ಚಿಂತನೆಯೊಂದಿಗೆ ದೀನ ದಲಿತರ ಪರ ನಿಂತು ಶೋಷಿತರ ರಕ್ಷಣೆಯ ಹೊಣೆ ಹೊತ್ತು ಸುಸಂಸ್ಕೃತ ವೈಷ್ಣವರ ವಿರುದ್ಧ ಬಂಡಾಯದ ಕಿಡಿ ಹೊತ್ತಿಸಿ ಆಂದೋಲನ ಕೈಗೊಂಡರು. ಭಕ್ತಿ ಸಂಬಂಧಿತ ಕೀರ್ತನೆಗಳೊಂದಿಗೆ ಜನಪರ ಕಾಳಜಿಯ ಸಮಾಜಮುಖಿ ಸಾಹಿತ್ಯವನ್ನು ರಚಿಸುವ ಮೂಲಕ ಜನಸೇವೆ ಜನಾರ್ಧನನ ಸೇವೆಯನ್ನು ಮಾಡಿ ಜನಮನದಲ್ಲಿ ಶಾಶ್ವತವಾಗಿ ಉಳಿದವರು ಕನಕದಾಸರಾಗಿದ್ದಾರೆ. ಅವರು ರಚಿಸಿದ ಸಾಹಿತ್ಯದಲ್ಲಿಯ ಸಾಮಾಜಿಕ ಹಾಗೂ ದಲಿತ ಹಿತಚಿಂತನೆಗಳಿಂದ ಅವರೊಬ್ಬ ವರಕವಿಯಾಗಿದ್ದಾರೆ ಎಂಬುದನ್ನು ಸಾಮಾನ್ಯನೂ ಕೂಡ ದೃಢಪಡಿಸುತ್ತಾನೆ.

ಪುರೋಹಿತ ವರ್ಗದವರ ಉಪಟಳಕ್ಕೆ ಸಿಲಿಕಿ ನಲುಗಿದ್ದ ದಲಿತ ವೇದನೆಯು ಕನಕದಾಸರನ್ನು ನಿದ್ದೆಗೆಡಿಸಿತ್ತೆನ್ನುವುದಕ್ಕೆ ಸ್ವತಃ ಶೂದ್ರರಾದ ಕನಕದಾಸರೂ ಮಠಿಕರಿಂದ ಅನುಭವಿಸಿದ ಜಾತೀಯತೆಯ ಚಿತ್ರಹಿಂಸೆಗಳೇ ಕಾರಣವಾಗಿವೆ. ದಲಿತರನ್ನು ಕನಿಷ್ಠ ಸ್ಥಾನದಲ್ಲಿರಿಸಿ ಗರಿಷ್ಠಸ್ಥಾನ ಹೊಂದಿದ ವೈದಿಕರ ನಡೆ–ನುಡಿಗಳು ಕನಕದಾಸರಿಗೆ ರಾಮಧಾನ್ಯ ಚರಿತ್ರೆಯ ರಚನೆಗೆ ಕಾರಣವಾಯಿತೆಂಬುದರಲ್ಲಿ ಎರಡು ಮಾತಿಲ್ಲ. ರಾಗಿಯ ಕಥೆ ರಾಮಾಯಣವೇ ಆಯಿತೆಂದರೆ ತಪ್ಪಾಗದು.

ಕನಕದಾಸರು ಬರೆದಿರುವ ರಾಗಿ–ರಾಮಾಯಣ ಅಥವಾ ರಾಮಧಾನ್ಯ ಚರಿತ್ರೆಯ ಕೃತಿಯು ದುರಹಂಕಾರಿಗಳಿಗೆ ತಕ್ಕ ಪಾಠ ಕಲಿಸುವ ಮತ್ತು ಸಮಾನತೆಯ ಧೋರಣೆಯನ್ನು ಹೊಂದಿರದ ಅಧಮರಿಗೆ ಹೇಳಿದ ನೀತಿ ಪಾಠವೂ ಆಗಿದೆ. ರಾಮಧಾನ್ಯ ಚರಿತ್ರೆಯು ಅತ್ಯಂತ ಚಿಕ್ಕದಾಗಿರುವುದು ನಿಜ. ಆದರೆ ಅದರೊಳಗೆ ಕನಕದಾಸರು ನಡೆಸಿದ ಸಂಪ್ರದಾಯಸ್ಥರೊಂದಿಗಿನ ವಾಗ್ಯುದ್ಧ ಅತ್ಯಂತ ಮಾರ್ಮಿಕವಾಗಿರುವುದಾಗಿದೆ.

ಮೇಲ್ವರ್ಗ–ಕೆಳವರ್ಗಗಳ ಘರ್ಷಣೆಯಲ್ಲಿ ಕೆಳ ವರ್ಗದವರ ಹೋರಾಟಕ್ಕೆ ಸಿಗುವ ಜಯ ಹಾಗೂ ಸ್ವಾತಂತ್ರ್ಯ ದಮನಿತ ದಲಿತರ ಜೀವನವನ್ನು ಉತ್ತೇಜನಗೊಳಿಸಲು ಸಹಕರಿಸಿದೆ. ದಲಿತ ಬಂಡಾಯದ ಅಪ್ಪಟ ಕೃತಿ ಎಂದರೆ ಕನಕದಾಸರು ಬರೆದು ಪ್ರಸ್ತುತಪಡಿಸಿರುವ ರಾಮಧಾನ್ಯ ಚರಿತ್ರೆಯ ಷಟ್ಪದಿ ರೂಪದ ಸಾಹಿತ್ಯ ಕೃತಿಯಾಗಿದೆ. ರಾಮಧಾನ್ಯ ಎಂದರೆ 'ರಾಗಿ' ರಾಮನ ಮತ್ತೊಂದು ಹೆಸರು ರಾಘವ ಎಂದಾಗಿದ್ದರಿಂದ ರಾಘವ, ರಾಘ, ರಾಗಿ ಎಂದು ಹೆಸರು ಪಡೆಯಿತು. ಏಕೆಂದರೆ ರಾಮಾಯಣ ಎಂಬುದಕ್ಕೆ ದೀರ್ಘತೆ, ಮಹಾವ್ಯಥೆಯ ಕತೆ ಎಂಬ ಅರ್ಥ ಜನಸಮೂಹದಲ್ಲಿ ಚಲಾವಣೆಯಲ್ಲಿದೆ. ಉದಾಹರಣೆಗೆ ಜನಪದರು 'ನಿಮ್ಮ ರಾಮಾಣ್ಯ ಈಗಲೇ ಎಲ್ಲಿ ಮುಗೀತವೆ?' ಎಂದು ಯಾವುದೇ ಸಮಸ್ಯೆಯ ಸಂದರ್ಭದಲ್ಲಿ ಹೇಳುವುದುಂಟು. ರಾಮಾಯಣ ಎಂಬುದು ಕೊನೆಯ ಎರಡು ಅಕ್ಷರಗಳ ಪಲ್ಲಟದಿಂದ ಜನಪದರ ಬಾಯಲ್ಲಿ 'ರಾಮಾಣ್ಯ' ಆಗಿದೆ. ಆದ್ದರಿಂದ ರಾಮಾಯಣ ಎಂದರೆ ದೀರ್ಘಕತೆ, ಮಹಾಕತೆ, ಮಹಾವ್ಯಥೆಯ ಕತೆ ಎಂಬೆಲ್ಲ ಅರ್ಥಗಳನ್ನು ಗರ್ಭೀಕರಿಸಿಕೊಂಡಿದೆ. ಅದೇ ರೀತಿ ಕನಕದಾಸರು ರಾಮಧಾನ್ಯ ಚರಿತೆ ಕೃತಿಯ ಪ್ರಾರಂಭದಲ್ಲಿ ಇದನ್ನು ಮಹಾಕತೆ ಎಂದು ಮೂರು ಸಾರಿ ಡಂಗುರ ಹೊಡೆದಂತೆ ಸಾರಿದ್ದಾರೆ. ಅಂದರೆ ದೀರ್ಘಕತೆ, ಮಹಾಕತೆಯ ಕತೆ ಎಂಬ ಅರ್ಥದಲ್ಲಿ.

ರಾಮಧಾನ್ಯದ ಕೃತಿಯನೀ ಜನ
ಜನಸ್ತೋಮವೆಲ್ಲಾ ದರಿಸುವಂದದಿ
ಭೂಮಿಗಚ್ಚರಿಯಾಗಿ ಪೇಳುವೆನೀ ಮಹಾಕಥೆಯ'

ಎಂಬಲ್ಲಿ ಬರುವ 'ಭೂಮಿಗಚ್ಚರಿಯಾಗಿ' ಎಂಬ ಪ್ರಯೋಗ ಅವರು ಅನುಭವಿಸಿದ ಸಾಮಾಜಿಕ ಅನ್ಯಾಯ ಅವಮಾನಗಳನ್ನು ಸ್ವಸಾಮರ್ಥ್ಯದಿಂದಲೇ ಮೆಟ್ಟಿ ಮೇಲೇರಿ ನಿಂತ ಸೋಜಿಗವನ್ನು ಸೂಚಿಸುತ್ತದೆ. ಮಹಾಕಥೆ ಎಂಬುದು ಕನಕದಾಸರು ಮೇಲ್ವರ್ಗದವರಿಂದ ಅನುಭವಿಸಿದ ಅವಮಾನ, ಅವಹೇಳನ, ಹಾಗೂ ಶೋಷಣಾತ್ಮಕ ಸಂದರ್ಭಗಳ ಸತ್ಯಕತೆ.

ಹಳ್ಳಿಗಾಡಿನಲ್ಲಿ ಜನರಾಡುವ ಮಾತುಗಳಲ್ಲಿ ರಾಗಿಯು ಚರ್ಚೆಯ ವಸ್ತುವಾಗುವುದೂ ಉಂಟು. ಅಂದರೆ ಕನಕದಾಸರ ಅವಧಿಯಲ್ಲಿ ರಾಗಿಯೇ ಪ್ರಧಾನ ಧಾನ್ಯವಾಗಿತ್ತು ಎಂಬುದನ್ನು ಅವರ ಕೀರ್ತನೆಗಳೇ ಸಾರಿ ಹೇಳುವುದುಂಟು. 'ನೀನು ಆ ಮಟ್ಟಕ್ಕೆ ಬರಬೇಕಾದ್ರೆ ಬಹಳ ರಾಗಿ ಬೀಸಬೇಕು' ಎಂಬ ಮಾತನ್ನು ಹಳ್ಳಿಗರು ಹೇಳುವುದರೊಂದಿಗೆ ರಾಗಿಯ ಮಹತ್ವವನ್ನು ಎತ್ತಿ ಹಿಡಿದಿರುವುದು ಗ್ರಂಥಗಳಿಂದ ತಿಳಿದು ಬಂದ ವಿಷಯವಾಗಿದೆ. ರಾಗಿ ಶ್ರಮದ ಸಂಕೇತವಾಗಿದ್ದರಿಂದ ಹಳ್ಳಿಗರು ತಮ್ಮ ಶ್ರಮದ ಪ್ರತೀಕವೆಂದು ರಾಗಿಯನ್ನು ಭಾವಿಸಿದ್ದಾರೆ. ರಾಮಾಯಣದ ಕತೆಯಲ್ಲಿ ರಾಗಿಯ ಕತೆ ಅಡಕವಾಗಿದ್ದರಿಂದ ರಾಗಿಯ ಕತೆಯು ರಾಮನ ಅವಧಿಯಾದ ತ್ರೇತಾಯುಗಕ್ಕೆ ಹೋಗುತ್ತದೆ.

ರಾಗಿ ರಾಮಾಯಣದ ಕತೆಯನ್ನು ಕೌಂಡಿಲ್ಯ ಮುನಿಗಳು ಮಹಾಭಾರತದ ಪಾಂಡವರು ವನವಾಸದಲ್ಲಿದ್ದ ಸಂದರ್ಭದಲ್ಲಿ ಶಾಂಡಿಲ್ಯ ಮುನಿಗಳು ಹೇಳಿದ್ದರೆಂಬುದನ್ನು ಸ್ವತಃ ಕನಕದಾಸರು ಉಲ್ಲೇಖಿಸುತ್ತಾರೆ. ಅಂದರೆ, ತ್ರೇತಾ ಹಾಗೂ ದ್ವಾಪರ ಯುಗಗಳ ಮಧ್ಯದಲ್ಲಿ ಭದ್ರವಾದ ಬುನಾದಿ ಹಾಕುವುದರೊಂದಿಗೆ ರಾಮಾಯಣದ ಮಹಲನ್ನೇ ಕಟ್ಟಿದ್ದಾರೆಂಬುದನ್ನು ಇಲ್ಲಿ ಮನಗಾಣಬಹುದು. ಆದರ್ಶ ಪುರುಷನಾದ ರಾಮನು ನರೆದಲಗ (ರಾಗಿ) ಹಾಗೂ ವ್ರೀಹಿ (ಬತ್ತ) ಇವರಿಬ್ಬರ ವಾದ-ವಿವಾದಗಳಿಗೆ ತೆರೆ ಎಳೆದು ರಾಗಿಯ ಮಹಿಮೆಯನ್ನು ಬಹಿರಂಗಗೊಳಿಸಿದ ರೀತಿಯನ್ನು ಕನಕದಾಸರು ತಮ್ಮ 'ರಾಮಧಾನ್ಯ ಚರಿತ್ರೆ' ಎಂಬ ಕೃತಿಯಲ್ಲಿ ವಿಸ್ತೃತ ರೂಪದಲ್ಲಿ ತಿಳಿಸಿದ್ದಾರೆ.

ರಾಗಿಯ ಕಥೆಯೊಂದಿಗೆ ರಾಮನ ಕಥೆಯನ್ನು ಥಳುಕು ಹಾಕಿರುವ ಕನಕದಾಸರ ವೈಚಾರಿಕ ಹಿನ್ನೆಲೆಯಲ್ಲಿ ಒಂದು ಘನವಾದ ಉದ್ದೇಶವಿದೆ. ರಾಮನು ಹೇಗೆ ಹದಿನಾಲ್ಕು ವರ್ಷಗಳ ಕಾಲ ವನವಾಸ ಅನುಭವಿಸಿ ಪಡಬಾರದ ಕಷ್ಟಗಳನ್ನು ಪಟ್ಟು ಮತ್ತೆ ಅಯೋಧ್ಯೆಗೆ ಮರಳಿ ಮತ್ತೆ ಪಟ್ಟವೇರಿದನೋ ಹಾಗೆಯೇ ರಾಗಿಯೂ ಸಹ ಭತ್ತದ ಶೋಷಣಾತ್ಮಕ ಹಾಗೂ ನಿಂದನಾತ್ಮಕ ಮಾತುಗಳಿಂದ ಪರಿತಪಿಸಿ ಸೆರೆಮನೆಯ ವಾಸ ಅನುಭವಿಸಿ ಕೊನೆಗೊಂದುದಿನ ರಾಮನ ಸನ್ನಿಧಾನ ಹಾಗೂ ದೇವೇಂದ್ರನ ಉಪಸ್ಥಿತಿಯಲ್ಲಿ ತಾನೇ ಶ್ರೇಷ್ಠನೆನಿಸಿಕೊಂಡು ಪಟ್ಟವೇರುವ ಸನ್ನಿವೇಶದ ಕಥೆಯನ್ನು ಶಾಂಡಿಲ್ಯ ಮುನಿ ಪಾಂಡವರ

ಹಿರಿಯನಾದ ಧರ್ಮರಾಯನಿಗೆ ಅರುಹಿರುವುದನ್ನು ಕನಕದಾಸರ ರಾಮಧಾನ್ಯ ಚರಿತ್ರೆಯಲ್ಲಿ ಕಾಣಬಹುದಾಗಿದೆ.

'ರಾಮಧಾನ್ಯ ಚರಿತ್ರೆಯ' ರಾಗಿ-ರಾಮಾಯಣವು ಕನಕದಾಸರು ಅನುಭವಿಸುವ ಜಾತಿ ನಿಂದನೆಗೆ ಸಂಬಂಧಿಸಿದಂತೆ ಪರೋಕ್ಷವಾಗಿ ಕನಕದಾಸರ ಆತ್ಮಚರಿತ್ರೆ ಎಂದರೂ ತಪ್ಪೇನಿಲ್ಲ. ತಮ್ಮ ಜೀವನದಲ್ಲಿ ಕಂಡುಂಡ ಜಾತೀಯತೆಯ ಕಹಿ ಅನುಭವಗಳನ್ನು ಸ್ವತಃ ತಾವೇ ರಾಗಿಯ ರೂಪದಲ್ಲಿ ತಮ್ಮ ಕತೆ ಹೇಳಿಕೊಂಡಿರುವುದು ಸಾಬೀತಾಗುತ್ತದೆ. 'ರಾಮಧಾನ್ಯ ಚರಿತ್ರೆ'ಯು ವರ್ಣ, ವರ್ಗಗಳ ಜೊತೆಗೆ ನಡೆಸಿದ ಹೋರಾಟದ ಫಲದಿಂದ ಸೃಷ್ಟಿಸಲ್ಪಟ್ಟಿದೆ ಎಂದರೂ ತಪ್ಪಾಗಲಾರದು. ಏಕೆಂದರೆ ಕನಕದಾಸರ ಅಂದಿನ ಸಮಯದಲ್ಲಿ ಮೇಲ್ಜಾತಿ–ಕೆಳಜಾತಿ, ಮೇಲ್ವರ್ಗ–ಕೆಳವರ್ಗ, ಸ್ಪೃಶ್ಯ–ಅಸ್ಪೃಶ್ಯ–ಪಂಡಿತ–ಪಾಮರ ಎಂಬ ವಿವಿಧ ರೀತಿಯ ಅನಿಷ್ಠ ಭಾವನೆಗಳು ಮೇಲ್ವರ್ಗದವರ ಮನಸ್ಸಿನಲ್ಲಿ ಮನೆ ಮಾಡಿದ್ದವು. ಮೇಲು–ಕೀಳುಗಳ ಘರ್ಷಣೆಗಳೊಂದಿಗೆ ಸಾಮಾಜಿಕ ಹಿತ ಕದಡಿ ಹೋಗಿತ್ತು. ಅಲ್ಲದೆ ಅವು ತಲತಲಾಂತರಗಳವರೆಗೆ ಮುಂದುವರೆದು ಶಾಶ್ವತವಾಗಿ ಸಾಮಾಜಿಕ ಅನಿಷ್ಠಗಳಿಂದ ಛಾಪು ಮೂಡಿಸಿಕೊಂಡಿದ್ದವು. ಅಂಥ ಅನಿಷ್ಠಗಳಿಗೆ ಬಲಿಯಾದ ಸಾಮಾನ್ಯ ಜನರ ಬದುಕು ದುಸ್ತರವಾಗಿತ್ತು. ಅನಿಷ್ಠಗಳೆಂದ ಹಾನಿ ಅನುಭವಿಸುವವರು, ಸಾಮಾಜಿಕ, ದೈಹಿಕ, ಹಾಗೂ ಮಾನಸಿಕವಾಗಿ ದಮನಕ್ಕೊಳಗಾಗುವವರು, ಚಿತ್ರಹಿಂಸೆ ಅನುಭವಿಸುವವರು, ಶೋಷಣೆಗೊಳಗಾಗುವವರು, ಕೆಳವರ್ಗ ಹಾಗೂ ಕೆಳಜಾತಿಯವರೇ ಆಗಿದ್ದರು. ಹಿಂಸಾತ್ಮಕ ಮನೋಭಾವನೆ ಹೊಂದಿದ್ದ ಮೇಲ್ವರ್ಗದವರು ನಿಷ್ಕರುಣ ಭಾವದೊಂದಿಗೆ ಶ್ರೀಸಾಮಾನ್ಯನ ಬದುಕನ್ನೇ ಬಲಿ ತೆಗೆದುಕೊಂಡು ವಿಜೃಂಭಿಸಿದ ಪ್ರತಿಯಾಗಿ ಕನಕದಾಸರು ರಾಗಿಯನ್ನು ರಾಮಾಯಣದೊಂದಿಗೆ ಸಮೀಕರಿಸಿ ರಾಗಿಯ ಅಸಹಾಯಕತೆಯನ್ನು ಅತ್ಯಂತ ಸೂಕ್ಷ್ಮವಾಗಿ ಕೃತಿಯಲ್ಲಿ ಅಳವಡಿಸಿದ್ದಾರೆಂಬುದು ಎಲ್ಲ ಕಾಲಕ್ಕೂ ಸತ್ಯವಾದುದುದಾಗಿದೆ.

ಯಾವ ಮನುಷ್ಯನೂ ತಾನು ಹುಟ್ಟಿದ ಜಾತಿಯಿಂದಲೇ ಶ್ರೇಷ್ಠ ಹಾಗೂ ಕನಿಷ್ಠ ಆಗಲಾರ. ಆತನ ಚಾರಿತ್ರಿಕ ಭಾವನೆಗಳಿಂದಲೇ ಸಮಾಜ ಅವನನ್ನು ಉತ್ತಮ–ಮಧ್ಯಮ–ಕನಿಷ್ಠ ಎಂದು ನಿರ್ಧರಿಸುತ್ತದೆ. ಇದನ್ನು ಕುವೆಂಪುರವರೂ ಕೂಡ ತಮ್ಮ ಕೃತಿಗಳಲ್ಲಿ ಹೇಳಿಕೊಂಡಿದ್ದಾರೆ. "ಹುಟ್ಟಿದಾಗ ಮಗು ವಿಶ್ವಮಾನವನಾಗಿರುತ್ತದೆ. ಸಾಮಾಜಿಕ ಅನಿಷ್ಠವಾದ ಜಾತೀಯತೆಗೆ ಸಿಲುಕಿ ಅದು ಒಂದು ವರ್ಗ ಅಥವಾ ಜಾತಿಗೆ ಅಂಟಿಕೊಂಡು ತನ್ನ ವಿಶ್ವಮಾನವತೆಯನ್ನು ಮರೆತು ಬಿಡುತ್ತದೆ". ಆದ್ದರಿಂದ ಮನುಷ್ಯನ ಶ್ರೇಷ್ಠತೆ ಹಾಗೂ ಕನಿಷ್ಠತೆಗಳು ನಿರ್ಧಾರವಾಗುವುದು ಆತನ ಸಾವಾಜಿಕ ನಡುವಳಿಕೆಗಳಿಂದ ಬೇರೆಯವರೊಂದಿಗೆ ನಾನು ಹೇಗೆ ನಡೆದುಕೊಂಡೆನು, ಬೇರೆಯವರು ಹೇಗೆ ನಡೆಸಿಕೊಂಡರು. ಎಂಬುದರೊಂದಿಗೆ ಸ್ವಧರ್ಮ ಹಿತಾಸಕ್ತಿಗಳಂತೆಯೇ ಪರಧರ್ಮಗಳ ಹಿತಾಸಕ್ತಿಗಳ ಕುರಿತು ಚಿಂತಿಸುವುದರಿಂದ ಮನುಷ್ಯನ ಶ್ರೇಷ್ಠತೆ ಸವಾಜದಿಂದ ನಿರ್ಧಾರವಾಗುತ್ತದೆ. ಇದಕ್ಕೆ ವಿರುದ್ಧವಾಗಿ ಸಮಾಜದಲ್ಲಿ ನಡೆದದ್ದಾದರೆ ಆತನ ಕನಿಷ್ಠತೆ ನಿರ್ಧಾರವಾಗುತ್ತದೆ.

ಪ್ರತಿಷ್ಠಿತ ಜಾತಿಯವರಿಂದ ಅಪ್ರತಿಷ್ಠಿತ ಜಾತಿಗಳವರು ನೊಂದದ್ದು ಬೆಂದದ್ದು ಜೊತೆಗೆ ರೊಚ್ಚಿಗೆದ್ದು ಪ್ರತಿಭಟಿಸಿದ್ದು ಸಮಾಜದ ಇತಿಹಾಸದ ಪುಟ-ಪುಟಗಳಿಂದ ಕಂಡುಬರುವ ಅಂಶವಾಗಿದೆ. ಹದಿನಾರನೆಯ ಶತಮಾನದಲ್ಲಿ ಬಾಳಿ ಬದುಕಿದ ಕನಕದಾಸರನ್ನೂ ಇದು ಬಿಟ್ಟಿದ್ದಾಗಿರಲಿಲ್ಲ. ಆದರೆ ಕನಕದಾಸರು ಮೇಲ್ವರ್ಗದವರ ಯಾವುದೇ ಹಿಂಸಾತ್ಮಕ ಚಟುವಟಿಕೆಗಳಿಂದ ಧೃತಿಗೆಟ್ಟು ಎಲ್ಲರಂತೆ ಹಿಂಜರಿಯಲಿಲ್ಲ. ವರ್ಣ ವ್ಯವಸ್ಥೆಯ ವಿರುದ್ಧ ಏಕಾಂಗಿಯಾಗಿ ಹೊರಾಡಿದರು; ಪ್ರತಿಭಟಿಸಿದರು. ದಲಿತ ವಿಮೋಚನೆಗಾಗಿ ಅಹೋರಾತ್ರಿ ಪ್ರಯತ್ನಿಸಿದರು.

ಕನಕದಾಸರಿಗಿಂತ ನಾಲ್ಕು ಶತಮಾನಗಳ ಹಿಂದಿನ ಅಂದರೆ ಹನ್ನೆರಡನೆಯ ಶತಮಾನದ ಶರಣ-ಶರಣೆಯರು ತಮ್ಮ ವಚನಕ್ರಾಂತಿಯ ಮೂಲಕವೂ ಸಮಾಜದಲ್ಲಿ ಸಮಾನತೆ ಸೃಷ್ಟಿಸಲು ಪ್ರಯತ್ನಿಸಿದರು. ಅಂದಿನ ದಿನಮಾನಗಳಲ್ಲಿ ಆಗುತ್ತಿದ್ದ ಅನ್ಯಾಯ ಅಧರ್ಮಗಳನ್ನು ನೇರವಾಗಿ ತರಾಟೆಗೆ ತೆಗೆದುಕೊಂಡು ಅಂಥ ಅನಿಷ್ಟಗಳನ್ನು ಬುಡಸಹಿತ ಕಿತ್ತೆಸೆಯುವ ಪ್ರಯತ್ನವನ್ನು ವಚನಗಳಲ್ಲಿ ಕಾಣುತ್ತೇವೆ. ನಿರ್ಭೀತ ನಿಲುವಿಗೆ ಕುಮ್ಮಕ್ಕು ಕೊಡುವ ವಾತಾವರಣವಿತ್ತು. ಆದರೆ ಕನಕದಾಸರು ಇದ್ದ ಹರಿದಾಸ ಚಳುವಳಿಯ ಚೌಕಟ್ಟಿನಲ್ಲಿ ಈ ರೀತಿ ಕುಮ್ಮಕ್ಕು ಕೊಡುವ ವಾತಾವರಣ ಅಲ್ಲಿ ಇರಲಿಲ್ಲ. ಆದರೂ ಕನಕದಾಸರು ಒಬ್ಬಂಟಿಯಾಗಿ ಛಲದಂಕ ಮಲ್ಲನಂತೆ ಕಡು ನಿಲುವಿನಿಂದ ಇಕ್ಕಟ್ಟು ಬಿಕ್ಕಟ್ಟುಗಳನ್ನು ಲೆಕ್ಕಿಸದೆ ನಿಷ್ಠುರತೆಯಿಂದ ಕೀರ್ತನೆಗಳ ಮುಖಾಂತರ ಮೇಲ್ವರ್ಗದವರನ್ನು ನೇರವಾಗಿ ಪ್ರಶ್ನಿಸಿದರು.

ಕುಲ ಕುಲ ಕುಲವೆನ್ನುತಿಹರು
ಕುಲವಾವುದು ಸತ್ಯ ಸುಖವುಳ್ಳ ಜನರಿಗೆ[2]

ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲಿರ[3]

ಎಂದು ಖಂಡು-ತುಂಡಾಗಿ ನುಡಿದು ಮೇಲ್ವರ್ಗವರನ್ನು ತರಾಟೆಗೆ ತೆಗೆದುಕೊಂಡರು. ನನ್ನ ಕುಲವೆಣಿಸುವ ಮೊದಲು ನಿಮ್ಮ ಕುಲದ ನೆಲೆ ಏನೆಂದು ಅರಿಯಿರಿ. ನನ್ನನ್ನು ದಡ್ಡ, ಕುರುಬ, ಎಂದು ಹೀಗಳೆಯುವ ನೀವು ಹುಚ್ಚು ಕುರುಬರು ಎಂದು ಮುಖದ ಮೇಲೆ ಹೊಡೆದಂತೆ ಕನಕದಾಸರು ಹೇಳಿದರು. ಆದರೂ ಮೇಲ್ವರ್ಗದವರ ಸ್ವಭಾವ ಹಾದಿ ಹಿಡಿಯಲಿಲ್ಲ. ಆಗ ಕನಕದಾಸರು ಜಾತಿ, ವರ್ಣ, ವರ್ಗಗಳ, ತಾರತಮ್ಯದ ಸೂಕ್ಷ್ಮ ವಿಚಾರಗಳನ್ನು ಬೀದಿಗೆಳೆಯದೇ ಕಲಾತ್ಮಕವಾಗಿ ಹೇಳಿ ಕಣ್ಣು ತೆರೆಸುವ ಉದ್ದೇಶದಿಂದ 'ರಾಮಧಾನ್ಯ ಚರಿತೆ' ಕೃತಿ ರಚಿಸಿ ತಮಗಾದ ಸಾಮಾಜಿಕ ಅವಮಾನವನ್ನು ಹೇಳಿಕೊಂಡಿದ್ದಾರೆ.

ಈಗಾಗಲೇ ಹೇಳಿರುವ ಹಾಗೆ ತ್ರೇತಾಯುಗದ ರಾಮಕಥೆಯ ವಿಶಾಲತೆಯ ನಟ್ಟ

ನಡುವೆ ಮೂಡಿ ಬಂದಿರುವ ರಾಗಿ ಕತೆಯನ್ನು 'ರಾಮ ಭಕ್ತಿ'ಯ ಮುಖಾಂತರ 'ರಾಗಿ ರಕ್ತಿ'ಯ ಕಡೆಗೆ ತಳ್ಳಿದೆ ಎಂಬುದನ್ನು ಮರೆಯುವಂತಿಲ್ಲ.

'ಊಟದ ರುಚಿಗಿಂತ ಧಾನ್ಯದ ಸತ್ವ ಮುಖ್ಯ' ಎಂಬ ಮಾತಿಗನುಗುಣವಾಗಿ ವ್ಯಕ್ತಿಯ ರುಚಿಕರ ಮಾತು, ನಟನೆಗಳಿಗಿಂತ ಆತನ ಸತ್ವಯುತ ಸಾಧನೆಗಳು ಮುಖ್ಯವಾಗಿದ್ದು ಅವುಗಳೇ ಶ್ರೇಷ್ಠತೆಯ ಮಾನದಂಡ ಎಂಬುದನ್ನು ಸಿದ್ಧಪಡಿಸಿದ ಕನಕದಾಸರು. ರಾಗಿ ಹಾಗೂ ನೆಲ್ಲುಗಳ ಮಧ್ಯೆ ಸಂವಾದವೇರ್ಪಡಿಸಿ ರಾಗಿಯ ಶ್ರೇಷ್ಠತೆಯನ್ನು ಎತ್ತಿ ಹಿಡಿದಿದ್ದಾರೆ. 'ಜಾತಿ ಋಣ'ಕ್ಕಿಂತ 'ನೀತಿ ಋಣ'ಕ್ಕೆ ಆದ್ಯತೆ ಕೊಡಬೇಕು ಎಂಬುದು. ಈ ಕೆಳಗಿನ ಮಾತುಗಳಿಂದ ಸ್ಪಷ್ಟವಾಗುತ್ತದೆ.

ಇನಕುಲಾನ್ವಯತಿಲಕ ಚಿತ್ತೈ
ಸೆನಗೆ ಸವಿಯಹುದಿನ್ನು ಧಾನ್ಯದ
ತನುವನೀಕ್ಷಿಸಬೇಕು ದೇವರು ತರಿಸಿ ನೀವೆಂದ[4]

'ಧಾನ್ಯದ ತನುವನೀಕ್ಷಿಸಬೇಕು'[5] ಎಂಬ ಹನುಮನ ಮಾತು ಚಿಂತನಾರ್ಹವಾದುದಾಗಿದೆ. ಗೌತಮರ ಋಷಿಯ ಅಪ್ಪಣೆಯಂತೆ ನವಧಾನ್ಯಗಳಾದ ನರೆದಲಗ (ರಾಗಿ) ನೆಲ್ಲು (ಭತ್ತ) ಹಾರಕ, ಬರಗು, ಜೋಳ, ಕಂಬು, ಸಾಮೆ, ಗೋಧಿ, ನವಣೆಗಳನ್ನು ರಾಮನ ಮುಂದೆ ರಾಶಿ ಹಾಕುತ್ತಾರೆ. ಆಗ ರಾಮನು ನೆರೆದ ಎಲ್ಲ ಮುನಿಗಳನ್ನುದ್ದೇಶಿಸಿ ಈ ನವ ಧಾನ್ಯಗಳಲ್ಲಿ ಯಾವುದು ಶ್ರೇಷ್ಠವಾದುದು? ಪರಮ ಸಾರದ ಹೃದಯನು ಯಾರು? ಎಂದು ಪ್ರಶ್ನಿಸಲಾಗಿ ಅಲ್ಲಿದ್ದವರೆಲ್ಲರೂ ಒಂದೊಂದು ಧಾನ್ಯದ ಕುರಿತು ಅತಿಶಯವಾಗಿ ಹೊಗಳಿ ಹೇಳಿದರು. ರಾಮನು 'ಹಲವು ಧಾನ್ಯಗಳ ಮತವೇಕೆ, ಒಂದನೇ ಪೇಳಿ' ಎನ್ನುತ್ತಾನೆ. ಆಗ ಗೌತಮ:

ದಾಶರಥಿ ಚಿತ್ತೈಸು ನಮ್ಮಯ
ದೇಶಕತಿಶಯ ನರೆದಲಗನೇ
ವಾಸಿಯುಳ್ಳವನೀತ ಮಿಕ್ಕಿನ ಧಾನ್ಯವೇಕೆನಲು[6]

ಇಲ್ಲಿ 'ಪರಮಸಾರದ ಹೃದಯನಾರು'[7] ಎಂಬ ಪ್ರಶ್ನೆಗೆ ಗೌತಮನ 'ವಾಸಿಯುಳ್ಳವ ನೀತ' ಎಂಬ ಉತ್ತರ ಸತ್ವಗುಣ ಸಂಪನ್ನತೆಗೆ ಒತ್ತು ಕೊಟ್ಟಿರುವುದಾಗಿದೆ.

ಗೌತಮನ ರಾಗಿಯ ಪರವಾದ ಪಕ್ಷಪಾತದ ನುಡಿಗಳನ್ನು ಕೇಳಿದಾಕ್ಷಣವೇ ಶ್ರೇಷ್ಠ ಕುಲ ಸಂಜಾತನೆಂದು ಕೊಬ್ಬಿನಿಂದ ಮೆರೆಯುತ್ತಿದ್ದ ವ್ರೀಹಿಗೆ ಅದನ್ನು ಸಹಿಸಿಕೊಳ್ಳಲಾಗಲಿಲ್ಲ. ಗೌತಮರನ್ನು ಕುರಿತು ಹೇಳುತ್ತ "ಒಳ್ಳೆಯ ಮಾತನ್ನು ಹೇಳಿದೆ ದೋಷರಹಿತನಾದ ನೀನು ಇಷ್ಟೊಂದು ಪಕ್ಷಪಾತ ತೋರಿಸುವುದೆ?" ಎಂದು ಗೊಣಗುತ್ತ ಎಲ್ಲ ಧರ್ಮದ ಸಾರವನ್ನು ತಿಳಿದಿರುವ, ಎಲ್ಲರ ಯೋಗ್ಯತೆಯನ್ನು ತಿಳಿದಿರುವ ನೀವೇ ನನ್ನನ್ನು ಉಪೇಕ್ಷಿಸಿ ಮತ್ತೊಬ್ಬನನ್ನು ಅಪೇಕ್ಷಿಸಿ ಆಡಿರುವುದು ಸರಿಯೆ? ನವಧಾನ್ಯಗಳಲ್ಲಿಯೇ ಶ್ರೇಷ್ಠನಾದ

ನೆಲ್ಲು ನಾನಿರುವಾಗ, ಗೋಧಿ ಮೊದಲಾದ ಧಾನ್ಯಗಳಿರುವಾಗ ಇವರಲ್ಲಿ 'ಬಲ್ಲಿದನು ನರೆದಲಗನೆಂದು ಹೇಳುವುದು ಇದಾವ ಮತ?' ಎಂದು ಗೌತಮನಿಗೆ ಹೇಳುತ್ತಾ ನರೆದಲಗವನ್ನು ತರಾಟೆಗೆ ತೆಗೆದುಕೊಳ್ಳುತ್ತಾನೆ.

ಏನೆಲವೂ ನರೆದಲಗ ನಿನು ಸ
ಮಾನವೇ ಯೆನಗಿಲ್ಲಿ, ನಮ್ಮನು
ದಾನವಾಂತಕ ಬಲ್ಲನಿಬ್ಬರ ಹೆಚ್ಚು ಕುಂದುಗಳ
ಜಾನಕಿ ಪತಿ ಸನಿಹದಲಿ ಕುಲ
ಹೀನ ನೀನು ಪ್ರತಿಷ್ಠ ಸುಡು ಮತಿ
ಹೀನ ನೀನೆಂದೆನುತ ಖತಿಯಲಿ ಬೈದು ಭಂಗಿಸಿದ[8]

'ಏನೆಲವೋ ನರೆದಲಗ' ಎಂಬ ಅಹಂಕಾರದ ಮಾತಿನಲ್ಲಿ ದ್ವೇಷ, ಅಸೂಯೆ, ಸೇಡು, ಕೀಳು ಹಾಗೂ ತಾರತಮ್ಯದ ಭಾವನೆ ಕಂಡುಬರುತ್ತದೆ. ಅಷ್ಟಕ್ಕೆ ನಿಲ್ಲಿಸದೇ ಮುಂದುವರೆದ ನೆಲ್ಲು ಕುಲಹೀನನಾದ ನೀನು ರಾಮನ ಸಮ್ಮುಖದಲ್ಲಿ ವಿರಾಜಮಾನವಾಗಿ ಮೆರೆಯುತ್ತಿರುವೆಯಾ? ಎಂಬ ಟೀಕೆಯ ಮಾತು ರಾಮನಿಗೆ ಪ್ರೀತಿ ಪಾತ್ರನಾದ ಹನುಮಂತ ಹಾಗೂ ವ್ಯಾಸರಾಯರ ಪ್ರೀತಿಪಾತ್ರನಾದ ಕನಕದಾಸರನ್ನು ಗುರಿ ಇಟ್ಟು ಹೇಳಿದ ಮಾತುಗಳು ಕೆಳವರ್ಗದವರನ್ನು ಉಪೇಕ್ಷಿಸುವ ರೀತಿಯಲ್ಲಿ ಕಂಡುಬರುತ್ತಿದೆ. ಒಂದೇ ಕಲ್ಲಿಗೆ ಎರಡು ಹಣ್ಣುಗಳನ್ನು ಕೆಡವಿದಂತೆ ಮೇಲ್ವರ್ಗದವರ ಹಿಯ್ಯಾಳಿಕೆಯ ಮಾತುಗಳು ಹನುಮ ಹಾಗೂ ಕನಕದಾಸರಂಥ ಕೆಳಜಾತಿಯವರನ್ನು ಕುದುರಿಸಿದಂತಾಗಿಸಿದೆ.

ಮುಂದುವರೆದು ಮಾತನಾಡುವುದರೊಂದಿಗೆ ನೆಲ್ಲು ಮತ್ತೆ ತನ್ನ ಅಹಂಕಾರ ಪ್ರದರ್ಶಿಸುತ್ತ ನನ್ನ ಸ್ಥಾನಮಾನ ರಾಜಾಧಿರಾಜ ಮಹಾರಾಜರ, ಧನಿಕರ ದೊಡ್ಡವರ, ಮೇಲ್ವರ್ಗದವರ ಒಡನಾಟದೊಂದಿಗಿದೆ. ನಾನು ಸರ್ವರ ಪ್ರಿಯನಾಗಿ ಉತ್ತುಂಗ ಸ್ಥಾನ ಪಡೆದಿರುವೆನು ಬ್ರಾಹ್ಮಣರ ಉಪನಯನ, ಸಂದರ್ಭದಲ್ಲಿ ಸುವ್ರತ ಸುಭೋಜನ ಸಂದರ್ಭದಲ್ಲಿ ಮಂತ್ರಾಕ್ಷತೆ ಹಾಗೂ ಶುಭಶೋಭನ ಎತ್ತುವ ಆರತಿಗೆ ನಾನಿಲ್ಲದಿದ್ದರೆ ಆ ಕೆಲಸವೇ ಜರುಗುವುದಿಲ್ಲ. ಯಜ್ಞ ಯಾಗಗಳಲ್ಲಿ, ಮಹಾರಾಜರ ಅರಮನೆಗಳಲ್ಲಿ ದೇವರಿಗೆ ನೈವೇದ್ಯದ ಸಂದರ್ಭದಲ್ಲಿ ನಾನು ಬೇಕೇ ಬೇಕು. ಹಾಗೆಯೇ ರಾಜರಿಗೆ, ಮಕ್ಕಳಿಗೆ, ನೆಂಟರಿಷ್ಟರಿಗೆ, ಬ್ರಾಹ್ಮಣರ ಸಮಾರಾಧನೆಗೆ, ವಿದ್ಯಾರಂಭ ಕಾಲಕ್ಕೆ ಬ್ರಾಹ್ಮಣರ ಮನೆ-ಮಠಗಳಲ್ಲಿ ನಡೆಯುವ ಹಬ್ಬ ಹರಿದಿನಗಳಲ್ಲಿ ನನ್ನನ್ನು ಶ್ರೇಷ್ಠನೆಂದು, ಯೋಗ್ಯನೆಂದು ಪ್ರೀತಿಯಿಂದ ಆದರಿಸುತ್ತಾರೆ. ಅದೇ ನರೆದಲಗನಾದ ನಿನ್ನನ್ನು ಕರಿಯ, ಒರಟು, ಅಸಹ್ಯಕರ ಧಾನ್ಯವೆಂದು ತಿಳಿದು ತಿರಸ್ಕರಿಸುತ್ತಾರೆ ಎಂದು ನೆಲ್ಲು ವಿಧ-ವಿಧ ರೀತಿಯಿಂದ ಹಿಯ್ಯಾಳಿಸಿ ರಾಗಿಯನ್ನು ಅಪಮಾನಗೊಳಿಸುತ್ತಾನೆ. ಇಷ್ಟಕ್ಕೆ ಸುಮ್ಮನಾಗದ ನೆಲ್ಲು ತನ್ನ ವರ್ಣನೆಯನ್ನು ಮುಂದುವರೆಸುತ್ತ ಹೊಸಮನೆಯ ಪುಣ್ಯಾರ್ಚನೆಗೆ ಮದುಮಕ್ಕಳ ಸೇಸೆಗೆ, ರಾಜರ ಗರುಡಿ ಮನೆಯ ಶಸ್ತ್ರಾಸ್ತ್ರಗಳ ಅರ್ಚನೆಗೆ ಹಾಗೂ ಉಚ್ಚ ಕುಲದವರ ಹಣೆಯ ಮೇಲೆ ಗಂಧಾಕ್ಷತೆಯಾಗಿ

ಶೋಭಿಸುವ ನನಗೆ ಈ ಲೋಕದಲ್ಲಿ ಸರಿಸಾಟಿ ಯಾರಿದ್ದಾರೆ? ಎಂದು ರಾಗಿಯನ್ನು ಪ್ರಶ್ನಿಸುತ್ತ ಮಂತ್ರ ತಂತ್ರಗಳ ಉಚ್ಚಾರಣೆಯೊಂದಿಗೆ ಹರಸಿ ಕೊಟ್ಟ ಅಕ್ಷತೆಯನ್ನು ಹಣೆಗೆ ಇಟ್ಟುಕೊಂಡರೆ ಪಾಪ ನಿವಾರಣೆಯಾಗಿ ಮನುಷ್ಯ ಪುನಿತನಾಗುತ್ತಾನೆ ಎಂದು ತನ್ನನ್ನು ತಾನೇ ವರ್ಣಿಸಿಕೊಳ್ಳುತ್ತ ರಾಗಿಯನ್ನು ಹಿಯಾಳಿಸುವುದರೊಂದಿಗೆ ಅಪಮಾನಗೊಳಿಸುವ ವ್ರೀಹಿಯ ದ್ವೇಷ ಮನೋಭಾವನೆಯನ್ನು ದಲಿತರನ್ನು ಹಿಯಾಳಿಸಿ ಮಾತನಾಡುವ ಬ್ರಾಹ್ಮಣರ ಮಾತುಗಳಿಗೆ ಕನಕದಾಸರು ಹೊಂದಿಸಿದ್ದಾರೆ.

ಅಷ್ಟಕ್ಕೆ ಸುಮ್ಮನಿರದ ನೆಲ್ಲು ಶ್ರೀಗಂಧದ ಮರಕ್ಕೆ ಒಣಗಿದ ಕಟ್ಟಿಗೆಯ ತುಂಡು ಸಾಟಿಯೆ? ಗೋವಿನ ಹಾಲಿಗೆ ಕುರಿಯ ಹಾಲು ಸಮವೆ? ಆಂಜನೇಯನಿಗೆ ಮರದ ಕಪಿ ಸಾಟಿಯೆ? ದೇವ ಗಂಗೆಗೆ ಹಳ್ಳವು ಸಮವೆ? ಗರುಡನಿಗೆ ಹದ್ದು, ಹಂಸಕ್ಕೆ ಬಕ, ಕೋಗಿಲೆಗೆ ಕಾಗೆ ಸಾಟಿಯೆ? ಎಂಬ ಭೇದಭಾವನೆಗಳ ಮಾತುಗಳೊಂದಿಗೆ ರಾಗಿಯನ್ನು ಹಿಯಾಳಿಸಿ ಕೆಳಸ್ತರಕ್ಕೆ ತಳ್ಳುತ್ತದೆ. ನನ್ನಂಥ ಮಾನ್ಯರಿಗೆ ನಿನ್ನಂಥ ಅಮಾನ್ಯನು ಸರಿಸಾಟಿಯೆ? ಎಂದು ರಾಗಿಯನ್ನ ಹೀನಾಯ ದೃಷ್ಟಿಯಿಂದ ಕಂಡ ನೆಲ್ಲು ತನ್ನಷ್ಟಕ್ಕೆ ತಾನೇ ಮಿಗಿಲು ಎಂಬುದನ್ನು ತನ್ನ ಬಡಿವಾರದ ಮಾತುಗಳ ಮುಖಾಂತರ ವಾದ ಮಂಡಿಸುತ್ತದೆ.

ವ್ರೀಹಿಯ ಹೀನಾಯ ಮಾತುಗಳನ್ನು ಕೇಳಿ-ಕೇಳಿ ರೋಸಿ ಹೋಗಿದ್ದ ನರೆದಲವೂ ಸಹನೆಯ ಕಟ್ಟೆಯೊಡೆದು ಹೊರಬಂದು ಪ್ರತೀಕಾರಕ್ಕೆ ನಿಲ್ಲುತ್ತದೆ. ನೆಲ್ಲಿನ ಅಪಮಾನಕಾರಿ ಮಾತುಗಳನ್ನು ಸಹಿಸಿ-ಸಹಿಸಿ ಸುಣ್ಣವಾಗಿದ್ದ ರಾಗಿ ಕೆರಳಿದ ಸಿಂಹದಂತೆ ಆರ್ಭಟಿಸಿ, ಗೂಳಿಯಂತೆ ಕಾಲ್ಕೆರೆದು ನಿಂತು. ಗುಟುರು ಹಾಕುತ್ತ ಬರ ಸಿಡಿಲಿನ ಧ್ವನಿ ಎತ್ತಿ ವ್ರಿಹಿಯನ್ನು ತರಾಟೆಗೆ ತೆಗೆದುಕೊಳ್ಳುತ್ತಾನೆ.

ನುಡಿಯ ಕೇಳುತ ಕನಲಿ ಕಂಗಳು
ಕಿಡಿಮಸಗಿ ಖತಿಗೊಂಡು ನುಡಿದೆನು
ಸಿಡಿಲ ಗರ್ಜನೆಯಂತೆ ಸಭೆಯಲಿ,ಜರಿದನಾ ವ್ರೀಹಿಯ
ನುಡಿಗೆ ಹೇಸದ ಭಂಡ ನಿನ್ನೊಳು
ಕೊಡುವರೆ ಮಾರುತ್ತರವ ಕಡು
ಜಡನಲಾ ನಿನ್ನೊಡನೆ ಮಾತೇಕೆಂದ ನರೆದಲಗ'

'ಕುಂತರೆ ಕುರುಬ ಎದ್ದು ನಿಂತರೆ ಕಿರುಬ' ಎಂಬ ಗಾದೆ ಮಾತಿನಂತೆ ಸಹನೆ ಇರುವವರೆಗೂ ಸೌಮ್ಯತೆಯ ಕುರುಬ ಸಹನೆ ಮೀರಿದರೆ ರೌದ್ರತೆಯ ಕಿರುಬ ಎಂದು ಗರ್ಜಿಸುತ್ತಾ ಇಲ್ಲಿ ಕನಕದಾಸರು ಕುರುಬನಾಗಿ ಸಹಿಸಿಕೊಂಡು ಸುಣ್ಣವಾಗಿ ವ್ರೀಹಿಯ ವಿರುದ್ಧ ಕಿರುಬನ ರೀತಿಯಾಗಿ ಸಿಡಿದೆದ್ದ ಪರಿ ಅನಾದಿ ಕಾಲದಿಂದ ಬ್ರಾಹ್ಮಣರ ಜಾತೀಯತೆಯ ಕೀಳರಮೆಯನ್ನು ಸಹಿಸಿ ಸಹಿಸಿ ಸಾಕಾಗಿದ್ದ ಕನಕರು ಅವರ ವಿರುದ್ಧ ಬಂಡಾಯವೆದ್ದು ಹೋರಾಟಕ್ಕಿಳಿದರೆಂಬುದು ಅವರ ಮಾತುಗಳಲ್ಲಿ ತಿಳಿದು ಬರುತ್ತದೆ. 'ನುಡಿಗೆ ಹೇಸದ ಭಂಡ' ಎಂದು ಅಧರ್ಮ, ಅನೀತಿಯ ಮಾತುಗಳನ್ನಾಡುವ ನೆಲ್ಲನ

ರೂಪದ ಮೇಲ್ವರ್ಗದ ಜನರಿಗೆ ತಮ್ಮ ಮಾತಿನಲ್ಲಿಯ ತಪ್ಪುಗಳನ್ನು ಅರುಹಿದ್ದಾರೆ.

ವ್ರೀಹಿಯು ಕನಕದಾಸರ ರಾಗಿಯ ಕಡು ನುಡಿಗಳನ್ನು ಗಣನೆಗೆ ತೆಗೆದುಕೊಳ್ಳದೇ ಮಾತನ್ನು ಆರಂಭಿಸುತ್ತ ಎಲೈ ನರೆದಲಗವೇ ನೀನೆಷ್ಟೇ ಕೂಗಿಕೊಂಡರೂ ನಿನ್ನನ್ನು ಮೇಲ್ವರ್ಗದವರು ಕಣ್ಣೆತ್ತಿ ನೋಡರು. "ನಿನ್ನನ್ನು ಆಹಾರವಾಗಿ ಸೇವಿಸಿದ ದಾನವರು, ಮಾನವರು ಕಿರಾತರು, ಜ್ಞಾನಹೀನರಾಗಿ ವಿಕಾರದಲ್ಲಿ ಮತಿಹೀನರಾದರು. ನಿನ್ನ ಒಳ್ಳೆಯ ಗುಣವಾದರೂ ಏನು? ಎಂದು ವಿತಂಡ ವಾದದೊಂದಿಗೆ ವ್ರೀಹಿಯು ನರೆದಲಗವನ್ನು ಪ್ರಶ್ನಿಸುತ್ತಾನೆ. ಆಗ ನರೆದಲಗವು ವ್ರಿಹಿಗೆ ತನ್ನ ತಪ್ಪನ್ನು ಅರುಹುತ್ತ ನಿನ್ನನ್ನೇ ನೀನು ಹೊಗಳಿಕೊಂಡರೆ ಅದು ನಿನ್ನ ಕೀಳುತನದ ಪ್ರತೀಕವಾಗಿದ್ದು ಅದು ಸಜ್ಜನರಿಗೆ ಒಪ್ಪಿಗೆಯಾಗುವಂಥದಲ್ಲ ಎಂದು ಸಭೆಯನ್ನುದ್ದೇಶಿಸಿ ನರೆದಲಗ ಹೀಗೆ ಹೇಳುತ್ತಾನೆ. ಕೇಳಿದಿರಾ ಈ ಮತಿಗೇಡಿ ವ್ರೀಹಿಯ ಅವಹೇಳನಕಾರಿ ಮಾತುಗಳನ್ನು. ಅದಕ್ಕೆ ಪ್ರತಿಯಾಗಿ ಮಾತನಾಡುವುದರಲ್ಲಿ ಯಾವುದೇ ಹುರುಳಿಲ್ಲವಾದ್ದರಿಂದ ಇದಕ್ಕೆ ತಕ್ಕ ತೀರ್ಮಾನ ನಿಮ್ಮಿಂದಲೇ ಆಗಬೇಕೆಂದು ನರೆದಗಲ ಸಭಿಕರಲ್ಲಿ ಕೇಳಿಕೊಳ್ಳುತ್ತಾ ಮತ್ತೆ ಎದುರಾಗಿ ವ್ರೀಹಿಯ ಮೇಲೆ ಹರಿಯಾಯುತ್ತಾನೆ.

ಸತ್ತವರ ಪ್ರತಿಬಿಂಬರೂಪನು
ಬಿತ್ತರಿಸಿ ಪಿತೃನಾಮಗಳ ನಿನ
ಗಿತ್ತು ಮೂವರ ಹೆಸರಿನಲಿ ಕರೆಕರೆದು ದರ್ಬೆಯಲಿ
ನೆತ್ತಿಯನು ಬಡಿಬಡಿದು ಕಡೆಯಲಿ
ತುತ್ತ ನೀಡುವದು ಪಶುಗಳಿಗೆ ನೀ
ನೆತ್ತಿದೆಯಲಾ ತನುವ ಸುಡಬೇಕೆಂದ ನರೆದಲಗ[10]

ತನುವ ಸುಡಬೇಕು ಎಂಬುದರ ಅರ್ಥ ನಿನ್ನ ಸಂತಾನವನ್ನೇ ಸುಟ್ಟು ಹಾಕಬೇಕು ಎನ್ನುವ ತೆರದಿ ನರೆದಗಲವು ವ್ರೀಹಿಯನ್ನು ತರಾಟೆಗೆ ತೆಗೆದುಕೊಂಡ ಪರಿಯು ತನ್ನ ಉಗ್ರತೆಯನ್ನು ವ್ರೀಹಿಯ ಮೇಲೆ ಹರಿಬಿಟ್ಟಿದೆ ಎಂದರೆ ತಪ್ಪಾಗದು. ಇಷ್ಟಾದರೂ ಸಭಿಕರ ತುಟಿಗಳು ಬಿಚ್ಚಿಕೊಳ್ಳದಾದಾಗ ನರೆದಲಗನ ಸಿಟ್ಟು ಅವರ ಮೇಲೂ ತಿರುಗಿತು. ಆಕ್ರೋಶ ಭರಿತನಾದ ನರೆದಗಲ ಹೀಗೆ ಹೇಳುತ್ತಾನೆ.

ಏನಿಹಿರಿ ಹಿರಿಕಿರಿದ ನುಡಿಯದೆ
ಮೌನ ದೀಕ್ಷಿತರಾದಿರಲ ಕಂ
ಡೇನು ಮುರಿದಾಡುವಿರಸಾಧ್ಯವೂ ಸಾಧ್ಯವೂ ನಿಮಗೆ
ಈ ನಪುಂಸಕನಲಿ ನಿರಂತರ
ವೇನು ಕಾರಣ ವಾದವಿದು ನಮ
ಗೇನು ಬುದ್ಧಿಯನರುಹುವಿರಿ ಪೇಳೆಂದ ನರೆದಲಗ[11]

ಈ ಕಾವ್ಯಭಾಗದಲ್ಲಿ ಕನಕದಾಸರು ತಮ್ಮ ನಿಷ್ಠುರತೆಯ ಪಾರದರ್ಶಕತೆಗೆ ಒತ್ತು ಕೊಟ್ಟಿದ್ದಾರೆಂದು ಸ್ಪಷ್ಟವಾಗುತ್ತದೆ. ಅಂದಿನ ಸಮಾಜದಲ್ಲಿಯ ಜನರೂ ಕೂಡ ನ್ಯಾಯ-ಅನ್ಯಾಯವನ್ನು ಕುರಿತು ಇದ್ದ ವಿಷಯವನ್ನು ಇದ್ದ ಹಾಗೆ ಹೇಳಿ ನ್ಯಾಯ ಒದಗಿಸುವಲ್ಲಿ ಹಿಂದೇಟು ಹಾಕುತ್ತಿದ್ದರು ಎಂಬುದನ್ನು ಕನಕದಾಸರು ಇಲ್ಲಿ ಸ್ಪಷ್ಟ ಪಡಿಸುತ್ತಾರೆ. ರಾಮನ ನೇತೃತ್ವದಲ್ಲಿ ನಡೆದ ಸಭೆಯಲ್ಲಿ ವ್ರೀಹಿಯ ಅಸಂಬದ್ಧ ಮಾತನ್ನು ಕೇಳಿಯೂ ಸರಿ ತಪ್ಪಿನ ಅರಿವನ್ನು ವ್ರೀಹಿಗೆ ಮಾಡಿಕೊಡುವ ಪ್ರಯತ್ನ ಮಾಡದೇ ಮೌನವಾಗಿ ಕುಳಿತಿದ್ದ ಸಭಿಕರನ್ನುದ್ದೇಶಿಸಿ ನರದಲಗವು 'ಬುದ್ಧಿ ಹೇಳುವ ಅರ್ಹತೆ ಹೊಂದಿರುವ ಮಹಾಜ್ಞಾನಿಗಳಾದ ನೀವು. ಮೌನ ತಳೆದಿರುವುದನ್ನು ಕಂಡರೆ ನನಗೆ ವಿಚಿತ್ರವೆನಿಸುತ್ತದೆ. ಮೌನ ದೀಕ್ಷಿತರಾದಿರಲ' ಎಂಬ ನುಡಿ ಮೌನಾವಸ್ಥೆಯಲ್ಲಿ ಕುಳಿತಿರುವ ಸಭಿಕರ ಮನಸ್ಸಿಗೆ ಚುಚ್ಚುವಂತಿದೆ. 'ಹಿರಿಯದಾವುದು ಕಿರಿಯದಾವುದು', 'ಮೇಲಾವುದು ಕೀಳಾವುದು' ಎಂದು ಬಾಯ್ಬಿಟ್ಟು ಹೇಳದೇ ಕಂಬದಂತೆ ಕುಳಿತಿದ್ದೀರಲ್ಲ. 'ಕಣ್ಣಾರೆ ಕಂಡು ಕಿವಿಯಾರೆ ಕೇಳಿಯೂ ಸತ್ಯ ನ್ಯಾಯವನ್ನು ಎತ್ತಿ ಹಿಡಿಯಲು ನಿಮಗೆ ಸಾಧ್ಯವೊ ಅಥವಾ ಅಸಾಧ್ಯವೊ ಎಂಬುದನ್ನು ಹೇಳಿಬಿಡಿ' ಎಂದು ನರೆದಗಲ ನ್ಯಾಯಮೂರ್ತಿಗಳನ್ನೇ ನೇರವಾಗಿ ಪ್ರಶ್ನಿಸುವ ನೈತಿಕ ಧೈರ್ಯ ಪ್ರದರ್ಶಿಸುತ್ತಾನೆ. ಕನಕದಾಸರು ಶೂದ್ರರಾದದ್ದರಿಂದ ಮೇಲ್ವರ್ಗದವರು ಅವರನ್ನು ಶೋಷಿಸುತ್ತಿದ್ದರು. ಯಾವ ರೀತಿಯಾಗಿ ವ್ರೀಹಿ ನರೆದಲಗವನ್ನು ಶೋಷಿಸಿ ಮಾತನಾಡುತ್ತಿದೆಯೋ ಅದೇ ರೀತಿಯಾಗಿ ಬ್ರಾಹ್ಮಣರು ಶೂದ್ರರನ್ನು ಶೋಷಿಸಿ ಹಿಂಸಿಸುತ್ತಿರುವುದನ್ನೇ ಆಧಾರವಾಗಿಟ್ಟುಕೊಂಡು ಕನಕದಾಸರು ವ್ರೀಹಿ-ನರೆದಲಗರ ಮಧ್ಯೆ ಜಗಳ ಸೃಷ್ಟಿಸಿ ರಾಮಧಾನ್ಯ ಚರಿತ್ರೆಯನ್ನು ರಚಿಸಿದರೆಂದು ಅರಿಯಬಹುದು.

ಸಭಿಕರೆಲ್ಲರೂ ನರೆದಲಗದ ಆಕ್ರೋಶಭರಿತ ಮಾತುಗಳನ್ನು ಗಣನೆಗೆ ತೆಗೆದುಕೊಂಡರಾದರೂ ಒಮ್ಮೆಲೇ ತೀರ್ಮಾನಕ್ಕೆ ಬಾರದೆ ಭತ್ತ ಮತ್ತು ರಾಗಿಯರನ್ನು ಪರೀಕ್ಷೆಗೊಳಪಡಿಸಿ ನಿರ್ಣಯಿಸಲು ನಿರ್ಧರಿಸುತ್ತಾರೆ. ಈ ಸನ್ನಿವೇಶವು ತುಂಬಾ ಅರ್ಥಗರ್ಭಿತವಾಗಿತ್ತು. ರಾಮನು ನಿರ್ಧಾರದ ನುಡಿಗಳನ್ನಾಡುತ್ತ ವ್ರೀಹಿ ಮತ್ತು ನರೆದಲಗರ ಹಿರಿ-ಕಿರಿತನದ ಪೌರುಷ ಒರೆಗೆ ಹಚ್ಚಿ ನಿರ್ಧರಿಸಬೇಕಾದರೆ ಇವರಿಬ್ಬರನ್ನು ಆರು ತಿಂಗಳುಗಳ ಕಾಲ ನೆಲದಡಿಯ ಸೆರೆಮನೆ (ಹಗೇವು)ಯಲ್ಲಿಡಬೇಕೆಂದು ಆಜ್ಞಾಪಿಸಿದನು. ಯಾವುದೇ ವಸ್ತುವಿನ ಶ್ರೇಷ್ಠತೆ-ಕನಿಷ್ಠತೆ, ಮೇಲು ಕೀಳುಗಳ ನಿರ್ಧಾರವಾಗುವುದು ಅದರ 'ಜಾತಿ ಋಣ'ದಿಂದಲ್ಲ. ಸತ್ಯಾಸತ್ಯತೆಯ ಸತ್ವಯುತ ಸಾಧನೆಯ 'ನೀತಿ ಋಣ'ದಿಂದ ಎಂಬುದನ್ನು ಸಮಾಜಕ್ಕೆ ತೋರಿಸುವುದೇ ರಾಮನ ನಿರ್ಧಾರವಾಗಿದೆ. ಆರು ತಿಂಗಳು ಸೆರೆವಾಸ ಕಳೆದ ಬಳಿಕ ತೀರ್ಮಾನ ನೀಡಲಾಗುವುದು. ಎಂದಾಕ್ಷಣವೇ ವ್ರೀಹಿ ತನಗೆ ನ್ಯಾಯದ ನಿರಾಕರಣವಾಗುವುದೆಂಬ ಭಯ ಹೊಂದಿದ್ದರೆ ನರೆದಗಲ ಸತ್ವ ಹಾಗೂ ಸತ್ಯಗಳನ್ನು ಎಂದೂ ತುಳಿಯಲು ಸಾಧ್ಯವಿಲ್ಲ ಎಂಬುದನ್ನು ದೃಢಪಡಿಸಿಕೊಂಡ ನೆರೆದಲಗ ರಾಮನ ನಿರ್ಧಾರದಿಂದ ತನಗೇ ನ್ಯಾಯ ಸಿಗುತ್ತದೆಂದು ಆತ್ಮವಿಶ್ವಾಸವನ್ನು ಹೊಂದಿತು.

ಅಂದರೆ ಕನಕದಾಸರ ಅಂದಿನ ದಿನಮಾನಗಳಲ್ಲಿಯೂ ದಲಿತ ದೌರ್ಜನ್ಯವನ್ನು

ಖಂಡಿಸಿ ದಲಿತ ಪರವಾಗಿ ನ್ಯಾಯ ದೊರಕಿಸಿ ಕೊಡುವ ಒಂದು ದಿನ ಬರುತ್ತದೆ ಎಂಬ ವಿಶ್ವಾಸವನ್ನು ಸ್ವತಃ ಅವರೇ ರಾಮಧಾನ್ಯ ಚರಿತ್ರೆಯ ಮುಖಾಂತರ ನಿರ್ಧರಿಸಿದ್ದಾರೆ. ಕನಕದಾಸರ ಅಂದಿನ ಹೋರಾಟದ ಫಲವಾಗಿ ಇಂದಿನ ದಲಿತರು ಸಮಾಜದಲ್ಲಿ ತಲೆ ಎತ್ತಿ ತಿರುಗುವಂತೆ ಮಾಡಿದೆ.

ಸೆರೆಗೆ ನಮ್ಮನು ನೂಕಿದೇವರು
ಸಿರಿಯ ಮದದಲಿ ಕಳೆದರೆಮ್ಮನು
ಮರದು ಸಲಹುವರಾರು ನಿಮ್ಮಯ ಕರುಣ ಹೊರತಾಗಿ
ಧರೆಯೊಳಿನ್ನಪಕೀರ್ತಿ ನಾರಿಯ
ಸೆರಗ ಹಿಡುವುದೇ ಲೇಸೆನುತ ತವೆ
ಕರಮುಗಿದು ತಲೆಗುತ್ತಿ ಪೇಳಿದನಾಗ ನರೆದಲಗ[12]

'ಸತ್ಯಕ್ಕೆ ಸಾವಿಲ್ಲ' ಎಂಬ ಗಾದೆ ಮಾತಿಗನುಸಾರವಾಗಿ ಸಮಚಿತ್ತದಿಂದ ಆತ್ಮವಿಶ್ವಾಸ ಹೊಂದಿದ್ದ ನರೆದಲಗವು ಪ್ರಸ್ತುತ ರಾಮನ ನಿಷ್ಕರುಣ ನಿರ್ಧಾರವನ್ನು ಒಪ್ಪಿಕೊಂಡು ಆರು ತಿಂಗಳುಗಳ ಸೆರೆಮನೆ ವಾಸವನ್ನು ಅನುಭವಿಸಿ ಗೆಲುವು ಸಾಧಿಸುವ ವಿಶ್ವಾಸವನ್ನು ಹೊಂದಿತ್ತು. ಅಂದರೆ ಯಾರು ಮೊದಲು ಕಷ್ಟ ಅನುಭವಿಸುತ್ತಾರೋ ಅವರು ಮುಂದಿನ ದಿನಗಳಲ್ಲಿ ಶಾಶ್ವತವಾಗಿ ಸುಖ ಅನುಭವಿಸುತ್ತಾರೆ ಎಂಬುದಾಗಿದೆ.

ರಾಮನ ಪಟ್ಟಾಭಿಷೇಕದ ತರುವಾಯ ಮತ್ತೆ ಹನುಮನನ್ನ ಕಳಿಸಿ ಸೆರೆಯಲ್ಲಿದ್ದ ವ್ರೀಹಿ ಮತ್ತು ನರೆದಲಗರನ್ನು, ಮುನಿವರರನ್ನು ಅಯೋಧ್ಯೆಗೆ ಕರೆತರಲು ಹೇಳುತ್ತಾನೆ. ಇವರು ಬಂದ ನಂತರ ಶಿವನನ್ನು ಪ್ರಾರ್ಥಿಸಿದಾಗ ತ್ರಿಭುವನ ಕರ್ತೃಗಳಾದ ದೇವತೆಗಳು, ಸೂರ್ಯ ಚಂದ್ರ ಮೊದಲಾದವರೆಲ್ಲ ಆಗಮಿಸುತ್ತಾರೆ. ಚತುರ್ವರ್ಣರು, ಋಷಿಪುಂಗವರು ಸೇರುತ್ತಾರೆ, ತುಂಬಿದ ಸಭೆಗೆ ಸೆರೆಯಾಳುಗಳನ್ನು ಕರೆತಂದಾಗ ನರೆದಗಲವು ಸರ್ವರಿಗೂ ಕೈಮುಗಿದು ತನ್ನ ಏರುಧ್ವನಿಯಿಂದ 'ಧರಣೀಕಾಂತ ರಘುವರನೀ ಸುಬುದ್ಧಿಯನೆಂತು ನಮಗರುಹುವಿರಿಯದ ಪೇಳಿ'[13] ಎಂದು ಧೈರ್ಯವಾಗಿ ಹೇಳಿತು. ಆದರೆ ವ್ರೀಹಿಗೆ ಉಸಿರೇ ಇಲ್ಲ ಇನ್ನೆಲ್ಲಿ ನಮಸ್ಕರಿಸುವುದು. ಕಾರಣ ಆರು ತಿಂಗಳು ಕಾಲ ಹಗೇವಿನಲ್ಲಿದ್ದು ವ್ರೀಹಿ ಮುಗ್ಗಿ ಹೋಗಿದ್ದರೆ ನರೆದಗಲ ಮಾತ್ರ ಎಂದಿನಂತೆ ಯುವಕನಂತೆ ಗಟ್ಟಿಮುಟ್ಟಾಗಿದ್ದ. ಯಾರು ಮೇಲ್ವರ್ಗದಲ್ಲಿದ್ದುಕೊಂಡು ಶ್ರಮ ವಹಿಸದೇ ಐಷಾರಾಮಿ ಜೀವನ ಕಳೆಯುತ್ತಾರೋ ಅವರು ದಿನಗಳದಂತೆ ಅನಾರೋಗ್ಯಕ್ಕೆ ತುತ್ತಾಗಿ ದೈಹಿಕವಾಗಿ ಬಡವರಾಗುತ್ತಾರೆ. ಅದೇ ಗಾಳಿ, ಮಳೆ, ಚಳಿ, ಬಿಸಿಲು, ಕಾಡು ಮೇಡೆನ್ನದೇ ಸತತ ಪರಿಶ್ರಮದೊಂದಿಗೆ ದುಡಿದು ತಿನ್ನುವರೋ ಅಂಥವರು ದೈಹಿಕ ಹಾಗೂ ಮಾನಸಿಕವಾಗಿ ಸದೃಢರಾಗುತ್ತಾರೆ ಅವರು ಎಷ್ಟೇ ವರ್ಷ ಕಷ್ಟ ಅನುಭವಿಸಿದರೂ ದೈಹಿಕವಾಗಿ ಶ್ರೀಮಂತರಾಗುತ್ತಾರೆಂಬ ಸತ್ಯ ಗೊತ್ತಾಗುತ್ತದೆ. ಅಂದರೆ ಸತ್ವಗುಣದ ತಡೆತ ಹಾಗೂ ನಿಸ್ಸತ್ವ ಗುಣದ ಸವೆತವನ್ನು ಕಲಾತ್ಮಕವಾಗಿ ಅರಿತುಕೊಳ್ಳಬಹುದಾಗಿದೆ.

ರಾಮನು ತನ್ನ ಸಭಾಮಂಟಪದಲ್ಲಿ ನೆರೆದಿದ್ದ ಸಕಲ ಮುನಿಗಳನ್ನುದ್ದೇಶಿಸಿ 'ಮನವ ವಂಚಿಸಲಾಗದೀ ಧರ್ಮವನು ನೆರೆ ತಿಳಿದು ಅನುನಯದಿ ಪೇಳಿ' ಎನ್ನುತ್ತಾನೆ. ಅಂದರೆ ಹೇಳುವ ಸತ್ಯದ ನುಡಿಗಳು ಕೆಲವರಿಗೆ ಕಹಿ ಎನಿಸಬಹುದಾದರೂ ಮೃದುವಾಗಿ ಯಾರ ಮನಸ್ಸನ್ನು ಘಾಸಿಗೊಳಿಸದೇ ಹೇಳಿ ಎನ್ನುವಲ್ಲಿ ಶ್ರೀರಾಮನೂ ಕೂಡಾ ಯಾವುದೇ ಸಮಯದಲ್ಲಿ ಮೇಲ್ಜಾತಿ–ಕೆಳಜಾತಿಯ ವೈಷಮ್ಯದಿಂದ ಶಾಂತಿ, ಸಾಮರಸ್ಯ ಕದಡಬಾರದೆಂಬ ಉದ್ದೇಶದೊಂದಿಗೆ ವಿವೇಕವಾಗಿ ಹೇಳಿದ್ದಾನೆ. ಆಗ ಎಲ್ಲ ಋಷಿಗಳು ದೇವತೆಗಳತ್ತ ತಿರುಗಿ ನೋಡಿದರು. ಆಗ ಪರಶುರಾಮನು ದೇವತೆಗಳತ್ತ ಮುಖ ಮಾಡಿ ಹೇಳಿದ.

ಆರು ನುಡಿಯರೆ ನೀವು ಹಿರಿಯರು
ಮೀರಿಸುವರಾರಿವರೊಳಗೆ ಗುಣ
ಸಾರನಾವನು ಪೇಳೆನಲು ಜಂಭಾರಿ ನಸುನಗುತ
ಸಾರ ಹೃದಯನು ನರೆದಲಗ ನಿ
ಸ್ಸಾರನೀ ವ್ರಿಹಿಯನಲು ಗುಣನಿಧಿ
ಮಾರುತಾತ್ಮಜ ನೋಡಿದನು ಸನ್ನೆಯಲಿ ನಾರದನ[14]

'ಮೀರಿಸುವವರಾರಿವರೊಳಗೆ' ಅಂದರೆ ಇವರಲ್ಲಿ ಮೇಲಾರು ಕೀಳಾರು ಎಂದು ಹೇಳಿದ ಪರಶುರಾಮನ ಮಾತುಗಳಿಗೆ ಪ್ರತಿಕ್ರಿಯಿಸಿದ ದೇವೇಂದ್ರನು 'ಸಾರ ಹೃದಯದವನು ನರೆದಲಗ ನಿಸ್ಸಾರನೀ ವ್ರೀಹಿ' ಎನ್ನುತ್ತಾನೆ. ಸಾರವತ್ತಾದ ಗುಣಕ್ಕೆ ಮಹತ್ವವಿದೆಯೇ ಹೊರತು ಶ್ರೇಷ್ಠ ಜಾತಿಯಲ್ಲಿ ಹುಟ್ಟಿದ ಮಾತ್ರಕ್ಕೆ ನಿಸ್ಸಾರ ಗುಣಕ್ಕೆ ಮಾನ್ಯತೆ ಇಲ್ಲ ಎಂಬ ಧ್ವನಿ ಇದೆ ಎಂಬುದು ಇಂದ್ರ ಹಾಗೂ ಪರಶುರಾಮರ ನುಡಿಗಳಲ್ಲಿ ಏಕಮೇವ ಅರ್ಥ ದೊರೆಯುತ್ತದೆ.

ಅಹುದು ಸುರಪನ ಮಾತು ನಿಶ್ಚಯ
ವಹುದು ನರೆದಲೆಗನೇ ಸಮರ್ಥನು
ಬಹಳ ಬಲಯುತ ಸೆರೆಗೆ ತಳ್ಳಲು ಕಾಂತಿಗೆಡಲಿಲ್ಲ
ಸಹಜವಿದು ಪರಪಕ್ವವಾದೆಡೆ
ವ್ರಿಹಿತವದು ಕೇಳೆಂದು ನಾರದ ನುಡಿದ ನಸುನಗುತ[15]

ಇಂದ್ರನ ನಿರ್ಣಾಯಕ ಮಾತುಗಳನ್ನು ಸಮರ್ಥಿಸಿಕೊಂಡ ನಾರದನು, ನರೆದಗಲ ಆರು ತಿಂಗಳುಗಳ ಕಾಲವೂ ಸೆರೆಯಲಿದ್ದು ತನ್ನ ರೂಪ, ಕಾಂತಿ ಹಾಗೂ ಶಕ್ತಿಯನ್ನು ಕಳೆದುಕೊಂಡಿಲ್ಲ. ಅದೇ ವ್ರಿಹಿಯ ಸೆರೆವಾಸದಲ್ಲಿ ತನ್ನ ಶಕ್ತಿ, ಧ್ವನಿ, ಕಾಂತಿ, ರೂಪಗಳೆಲ್ಲವನ್ನೂ ಕಳೆದು ಕೊಂಡು ಮುಗ್ಗಿ ಹೋಗಿದ್ದಾನೆ. ಅಂದರೆ ದೇವಾನುದೇವತೆಗಳಿಗೂ ಕೂಡ ರಾಗಿಯ ಸತ್ವವನ್ನು ತಿಳಿಸಲು ಕನಕದಾಸರು ರಾಮಧಾನ್ಯ ಚರಿತ್ರೆಯ ಮುಖಾಂತರ ತುಳಿತಕ್ಕೊಳಗಾದವರನ್ನು ದೇವಾನುದೇವತೆಗಳು ರಕ್ಷಿಸುತ್ತಾರೆ ಹಾಗೂ ಗರ್ವದಿಂದ ಮೆರೆದ ಯಾವುದೇ ವರ್ಗವನ್ನಾಗಲಿ ಪಕ್ಷಪಾತವೆಣಿಸದೆ ಶಿಕ್ಷಿಸಿ ಬುದ್ಧಿ ಕಲಿಸುತ್ತಾರೆಂದು

ತಿಳಿಯಬಹುದು. ಗೆಲುವು ಯಾವುದೇ ಸಮಯದಲ್ಲಿ ಸತ್ಯದ ಕಡೆಗೆ ವಾಲುತ್ತದೆ ಎಂಬುದು ಇದರರ್ಥ.

ಎಲ್ಲ ನವಧಾನ್ಯದಲಿ ಈತನೆ
ಬಲ್ಲಿದನು ಹುಸಿಯಲ್ಲ ಬಡವರ
ಬಲ್ಲಿದರನಾರೈದು ಸಲಹುವನಿವಗೆ ಸರಿಯುಂಟೆ
ನೆಲ್ಲಿನಲಿ ಗುಣವೇನು ಭಾಗ್ಯದಿ
ಬಲ್ಲಿದರ ಪತಿಕರಿಸುವನು ಅವ
ನಲ್ಲಿ ಸಾರವ ಕಾಣೆಯೆಂದನು ಕಪಿಲಮುನಿ ನಗುತ[16]

ಎಲ್ಲ ಧಾನ್ಯಗಳಲ್ಲಿ ನರೆದಲಗನೇ ಬಲ್ಲಿದನು, ಶ್ರೇಷ್ಠನು, ಸಮರ್ಥನು ಆಗಿದ್ದು ಇವನು ಸತ್ವಹೀನನಲ್ಲ ಬಡವ ಬಲ್ಲಿದರೆಂಬ ಭೇದವೆಣಿಸದೇ ಸರ್ವರನ್ನೂ ಸಮಾನವಾಗಿ ಕಂಡು ತನ್ನನ್ನೇ ಅವರಿಗಾಗಿ ಸಮರ್ಪಿಸಿಕೊಂಡು ಸಲಹುವ ಕರುಣಾಮಯಿ. ಇವನಿಗೆ ಯಾರೂ ಸಮಾನಾರಿಲ್ಲ. ಆದರೆ ನೆಲ್ಲು ಐಶ್ವರ್ಯವಂತರನ್ನು ಮಾತ್ರ ಪ್ರೀತಿಸುವವನಾಗಿದ್ದು ಸಿರಿವಂತರಿಗೆ ಮಾತ್ರ ಪ್ರಿಯನಾಗಿದ್ದು ಇವನಲ್ಲಿ ಯಾವುದೇ ಸತ್ವ, ಸಾರವನ್ನು ನಾ ಕಾಣೆ ಎಂಬ ಕಪಿಲ ಮುನಿಯು ನೆರೆದಲಗನ ಮಹತ್ವವನ್ನು ಎತ್ತಿ ಹಿಡಿದು 'ಇವಗೆ ಸರಿಯುಂಟೆ?' ಎಂದು ಹೇಳುವ ಪ್ರಶ್ನಾರ್ಥಕ ನುಡಿ ಕರ್ಮಠ ಬ್ರಾಹ್ಮಣರ ಕಣ್ತೆರೆಸುವಂತಿದೆ. ಇಲ್ಲಿ ವ್ಯಾಸರಾಯರ ಒಂದು ಮಾತನ್ನು ನೆನಪಿಸಿಕೊಳ್ಳುವುದಾದರೆ, ಮಠಿಕ ಶಿಷ್ಯಂದಿರ ತಿರಸ್ಕಾರಕ್ಕೊಳಗಾಗಿದ್ದ ಕನಕದಾಸರ ಅಂತರ್ಜ್ಞಾನ ಶಕ್ತಿಯನ್ನು ಪರೀಕ್ಷೆಗೊಳಪಡಿಸಿ 'ನಾಡಾಡಿಯಂತೆ ಮಾಡಿಬಿಟ್ಟಿರಿ ಇವಗೆ ನಾಡೆಲ್ಲ ಹುಡುಕಿದರೂ ಈಡಾರ ಕಾಣೆ'[17] ಎಂಬುದು ಕಪಿಲ ಮುನಿಗಳ ಮಾತಿಗೆ ಸರಿದೂಗುವಂತಿದೆ.

ಸುರಮುನಿಗಳೂ, ಭೂಸರರು, ಸಭಿಕರು ಎಲ್ಲರೂ ಒಕ್ಕೊರಲಿನಿಂದ 'ಸಾರ ಹೃದಯ ನಿನರೆದಲಗ ನಿಸ್ಸಾರನೀ ವ್ರೀಹಿ' ಎಂಬ ಅಭಿಪ್ರಾಯವನ್ನು ಮಂಡಿಸಿದಾಗ ರಾಮನು ಮೆಚ್ಚಿ ಸಂತಸದಿಂದ ನರೆದಲಗನಿಗೆ 'ರಾಘವ' ಎಂಬ ಹೆಸರನ್ನೇ ಕೊಟ್ಟು ಪುರಸ್ಕರಿಸಿದಾಗ ತನ್ನ ತಪ್ಪಿನ ಅರಿವಾಗಿಸಿಕೊಂಡ ವ್ರೀಹಿ ನಾಚಿ ತಲೆ ತಗ್ಗಿಸಿದನು. ಆರಂಭದಲ್ಲಿ ಗೌತಮನಿಂದ ನಂತರ ಇಂದ್ರನಿಂದ ಆಮೇಲೆ ನಾರದ ಹಾಗೂ ಅಂತ್ಯದಲ್ಲಿ ಕಪಿಲ ಮುನಿಯಿಂದ ನರೆದಲಗನೇ 'ಸಾರ ಹೃದಯನು, ಸತ್ವಶಾಲಿ' ಎಂಬ ಬಿರುದು ಪಡೆದ ರಾಗಿ ಆನಂದದಿಂದ ಶ್ರೀರಾಮನ ಚರಣಕ್ಕೆ ವಂದಿಸಿದನು. ಆಗ ಅಲ್ಲಿ ನೆರೆದಿದ್ದ ದೇವತೆಗಳು, ರಾಕ್ಷಸರು, ಭೂಸುರರು ಮುನಿಶ್ರೇಷ್ಠರು, ಎಲ್ಲರೂ 'ರಾಗಿ-ರಾಘವ' ಎಂದು ಹಾಡಿ ಹೊಗಳಿದರು. ಹರಸಿ ಉಪಚರಿಸಿದರು.

ಸಮಾಜದಲ್ಲಿ ಏರು-ಪೇರುಗಳು ಇರುವುದು ಸಹಜವಾಗಿದ್ದು, 'ಉಪ್ಪರಿಗೆ ತಿಪ್ಪೆಯಾಗಿ ತಿಪ್ಪೆ ಉಪ್ಪರಿಗೆ' ಆಗುವ ಕಾಲ ಒಂದು ದಿನ ಬಂದೇ ಬರುತ್ತದೆ ಎಂಬ ಮಾತಿಗೆ ಅನುಗುಣವಾಗಿ ಇಲ್ಲಿ ವ್ರೀಹಿ, ಮೇಲ್ವರ್ಗದವರ ಪರವಾಗಿ ಉಪ್ಪರಿಗೆಯಲ್ಲಿ ಮೆರೆಯುತ್ತಿದ್ದರೂ ಸತ್ಯಾನ್ವೇಷಣೆಯ ನಂತರ ತಿಪ್ಪೆಯಲ್ಲಿದ್ದ ರಾಗಿ ದೇವತೆಗಳ ಸಮ್ಮುಖದಲ್ಲಿ ಉಪ್ಪರಿಗೆಯ

ಉನ್ನತ ಸ್ಥಾನದಲ್ಲಿ ವಿರಾಜಮಾನನಾಗಿ ರಾಗಿ–ರಾಘವನ ಪ್ರಶಸ್ತಿಗೆ ಪಾತ್ರನಾಗಬೇಕಾಯಿತು. ಆಗ ವ್ರೀಹಿ ತಾರ್ಕಿಕವಾಗಿ ತನ್ನ ಸೋಲಿನ ಕಹಿ ಅನುಭವದೊಂದಿಗೆ ಉಪ್ಪರಿಗೆಯಿಂದ ತಿಪ್ಪೆಯಲ್ಲಿ ಬಿದ್ದು ಹೊರಳಾಡುತ್ತ ತನ್ನ ಅಜ್ಞಾನ ಅಹಂಕಾರದ ಪ್ರತಿಯಾಗಿ ನಿರಂತರ ಪರಿತಪಿಸಬೇಕಾಯಿತು. ಸತ್ಯದ ಕಾಲಚಕ್ರ ಉರುಳುತ್ತಿರುತ್ತದೆ ಅದು ಎಂದೂ ನಿಲುಗಡೆಯಾಗದು. ಅಸತ್ಯ ಕ್ಷಣಮಾತ್ರ ಮಿಂಚಿ ಮರೆಯಾಗುವಂಥದ್ದಾಗಿದ್ದು ಅದಕ್ಕೆ ಸಮಾಜದಲ್ಲಿ ಎಂದೂ ಸ್ಥಾನ ಸಿಗುವುದಿಲ್ಲ ಎಂಬುದು ವ್ರೀಹಿಯ ಸೋಲಿನ ಅವಸ್ಥೆಯಿಂದ ತಿಳಿದು ಬರುತ್ತದೆ.

ಮೇಲ್ಜಾತಿ ಅಥವಾ ಕೆಳಜಾತಿ ಎಂಬ ಭೇದ ಎಣಿಸುವ ಮೊದಲು ಸೂಕ್ಷ್ಮವಾಗಿ ವಿಚಾರ ಮಾಡಿದ್ದಾದರೆ ಮೇಲ್ಜಾತಿಯವರಿಗೆ ನಿರಂತರವಾಗಿ ಸಲ್ಲುತ್ತಿದ್ದ ಸ್ಥಾನಮಾನ ಗೌರವಗಳಿಗೆ ಚ್ಯುತಿ ಬಂದಾಗ ಅವರು ಅದನ್ನು ಸಹಿಸಿಕೊಳ್ಳುವುದು ಕಷ್ಟವಾಗುತ್ತದೆ. ಆದರೆ ಸಹಿಸಿಕೊಳ್ಳುವುದು ಅನಿವಾರ್ಯವೂ ಆಗಿರುತ್ತದೆ. ನೆಲ್ಲಿನ ಮಾಸಿದ ಮುಖ ನೀರು ತುಂಬಿದ ಕಣ್ಣನ್ನು ಕಂಡ ರಾಮ ನೆಲ್ಲಿನ ನೋವನ್ನು ಶಮನಗೊಳಿಸಲು ಪ್ರಯತ್ನಿಸುತ್ತಾನೆ.

ಮರುಳೆ ಬಾರೈ ವ್ರಿಹಿಯೆ ಮನದಲಿ
ಮನದಲಿ ಕೊರಗಿ ಚಿಂತಿಸಬೇಕೆ ನಾವೀ
ನರೆದಲಗನತಿಶಯವ ಮಾಡಿದೆವೆಂದು ಕನಲಿದೆಯ
ಧರೆಗೆ ಹೊದಿದ ಕ್ಷಾಮಗಾಲದಿ
ಕರುಣದಿಂ ನಡೆತಂದು ಲೋಕವ
ಹೊರೆವನದು ಕಾರಣವೆ ಪತಿಕರಿಸಿದೆವು ಕೇಳೆಂದ[18]

ಎಂದು ರಾಮನು ಮೇಲ್ಜಾತಿ–ಕೆಳಜಾತಿಗಳ ಮಧ್ಯೆ ಸಾಮರಸ್ಯ ಬೆಳೆಸಲು ಪ್ರಯತ್ನಿಸಿದ್ದಾನೆ. ಆದರೆ ನೆಲ್ಲು–ರಾಗಿಗಳ ಸಾಮರಸ್ಯ ಮೇಲ್ಜಾತಿ ಕೆಳಜಾತಿಗಳ ಸಮೀಕರಣ ಸಮಾಜ ಸ್ವಾಸ್ಥ್ಯಕ್ಕೆ ಅವಶ್ಯಕ ಎಂಬುದನ್ನು 'ಅತಿ ಹಿತದಲ್ಲಿ ಇಹುದು' ಎಂಬ ಮಾತಿನ ಮೂಲಕ ಹಾಗೂ ಮೇಲ್ಜಾತಿಯಂತೆ ಕೆಳಜಾತಿಯೂ ಪವಿತ್ರ ಎಂಬುದನ್ನು 'ನೀವೇ ಪಾವನರು' ಎಂಬ ಮಾತಿನ ಮೂಲಕ ಸೂಚಿಸಿರುವುದು ಗಮನಾರ್ಹ ವಿಷಯವಾಗಿದೆ.

ನಲವು ಹಿಂಗಿದ ವ್ರಿಹಿಯ ರಾಗಿಯು
ಜಲವ ಹಸ್ತದೊಳೊರಸಿ ಇಂದ್ರನ
ಬಳಿಗೆ ಕಳುಹುವೆ ನಿನ್ನ ಸಂಶಯವೇಕೆ ಚಿತ್ತದಲಿ
ಕಲಿತನವ ಕೈಕೊಂಡು ಸತ್ಯದ
ಹೊಲಬುದಪ್ಪದೆ ಚೋಳದೇಶವ
ನೊಲಿದು ನೀ ಸಲಹೆಂದು ನೇಮವನಿತ್ತು ಕಳುಹಿಸಿದ[19]

ನೆಲ್ಲು ಆರಂಭದಲ್ಲಿ ನರೆದಲಗನನ್ನು ದ್ವೇಷಾತ್ಮಕವಾಗಿ ಹಿಂಸಿಸಿ ಕಟು

ನುಡಿಗಳನ್ನಾಡಿದರೂ ರಾಗಿ ತಾನೇ ಗೆದ್ದೆನೆಂದು ಬೀಗಿಕೊಳ್ಳದೆ ನೊಂದ ವ್ರೀಹಿಯನ್ನು ಸಾಂತ್ವನಗೊಳಿಸುವ ಪ್ರಯತ್ನಕ್ಕೆ ಕೈಹಾಕಿ ಇಂದ್ರನೆಡೆಗೆ ವ್ರೀಹಿಯನ್ನು ಕಳಿಸುವ ಉದಾತ್ತ ಭಾವನೆ ಮೆರೆಸಿ ತಮಿಳುನಾಡಿಗೆ ಸ್ಥಾನಪಲ್ಲಟಗೊಳಿಸುವ ನಿರ್ಧಾರ ರಾಗಿಯ ನಿಸ್ವಾರ್ಥತೆಯನ್ನು ತೋರಿಸುತ್ತದೆ.

ಕನಕದಾಸರ ಸಂವಾದಕ್ಕನುಸಾರವಾಗಿ ಗ್ರಹಿಸಿಕೊಳ್ಳಬೇಕಾದ ಅಂಶವೆಂದರೆ ಅವರು ತಮ್ಮ ಗುರುಗಳಾದ ವ್ಯಾಸರಾಯರ ಮಠದಲ್ಲಿ ಕರ್ಮಠ ಬ್ರಾಹ್ಮಣ ವಟುಗಳೊಂದಿಗೆ ಶಿಷ್ಯರಾಗಿದ್ದ ಸಂದರ್ಭದಲ್ಲಿ ಮಠಿಕ ಶಿಷ್ಯಂದಿರಿಂದ ಅನುಭವಿಸಿದ ಜಾತೀಯತೆಯ ಚಿತ್ರ ಹಿಂಸೆಯೇ "ರಾಮಧಾನ್ಯ ಚರಿತ್ರೆ"ಯ ಹುಟ್ಟಿಗೆ ಕಾರಣವಾಗಿರಬಹುದು. ಸಂಪ್ರದಾಯಸ್ಥರು ಕೆಳವರ್ಗದವರನ್ನು ತಮ್ಮ ಕಾಲು ಕಸದಂತೆ ಕಂಡು, ಸಾಮಾಜಿಕ ಬಹಿಷ್ಕಾರಕ್ಕೊಳಪಡಿಸಿ ಊರಿನಿಂದ ಹೊರಗಿರುವಂತೆ ಆಜ್ಞಾಪಿಸಿದ ಕಹಿ ಘಟನೆಗಳು ಕನಕದಾಸರನ್ನು ರಾಗಿ-ರಾಮಾಯಣದ ಕತೆಯ ಹೆಣಿಕೆಗೆ ಪ್ರೇರಣೆಗಳಾದವೆಂಬಂತೆ ಅತಿಶಯವಾಗಲಾರದು.

ಇಲ್ಲಿ ಕನಕದಾಸರು ರಾಗಿಯಾಗಿ ವ್ಯಾಸರಾಯರ ಮಠಿಕ ಶಿಷ್ಯಂದಿರು ವ್ರೀಹಿಯಾಗಿ ಸ್ವತಃ ವ್ಯಾಸರಾಯರು ರಾಮನಾಗಿ ನಿರ್ವಹಿಸಿದ ಪಾತ್ರಗಳು ಅತ್ಯಂತ ಮಾರ್ಮಿಕವಾಗಿವೆ. ಮಠಿಕ ಶಿಷ್ಯಂದಿರು ಭತ್ತದ ರೂಪದಲ್ಲಿದ್ದುಕೊಂಡು ಕನಕದಾಸರ ಶೂದ್ರತೆಯನ್ನು ರಾಗಿಗೆ ಹೋಲಿಸಿಕೊಂಡು ಹಿಯ್ಯಾಳಿಸುವ ಹಾಗೂ ರಾಗಿಯ ಮಹಿಮೆ ಅಂದರೆ ಶೂದ್ರ ಕನಕದಾಸರ ಜ್ಞಾನದ ಮಹಿಮೆಯನ್ನು ಪರಿಕ್ಷೆಯ ಮುಖಾಂತರ ಪ್ರಚುರಪಡಿಸಿ ಕರ್ಮಠ ಶಿಷ್ಯಂದಿರಿಗೆ ಜ್ಞಾನದ ಪಾಠ ಹೇಳಿ ಐಕ್ಯತೆ ಸಾಧಿಸಿ ಸಮಾನತೆಯಿಂದ ಜೀವನದಲ್ಲಿ ಮುನ್ನಡೆಯಿರಿ ಎಂದು ರಾಮನ ರೂಪಧಾರಿ ವ್ಯಾಸರಾಯರು ಹೇಳಿದ್ದಾಗಿದೆ.

**ಕೊನೆ ಟಿಪ್ಪಣಿಗಳು:**

1. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ' ಲೇ. ಕೆ.ಬಿ. ತಳಗೇರಿ, ವಿದ್ಯಾನಿಧಿ ಪ್ರಕಾಶನ-ಗದಗ, ಪುಟ 84
2. ಸಮಗ್ರ ದಾಸ ಸಾಹಿತ್ಯ : ಸಂಪುಟ 5, ಕೀರ್ತನೆ 201, ಪುಟ 189, ಪ್ರೊ. ಸುಧಾಕರ
3. ಸಮಗ್ರ ದಾಸ ಸಾಹಿತ್ಯ : ಸಂಪುಟ 5, ಕೀರ್ತನೆ 202, ಪುಟ 190, ಪ್ರೊ. ಸುಧಾಕರ
4. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 58, ವಚನ 30, ಕೆ.ಬಿ. ತಳಗೇರಿ
5. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 58, ವಚನ 30, ಕೆ.ಬಿ. ತಳಗೇರಿ
6. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 60, ವಚನ 30, ಕೆ.ಬಿ. ತಳಗೇರಿ
7. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 59, ವಚನ 32, ಕೆ. ಬಿಳಗೇರಿ
8. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 61, ವಚನ 34, ಕೆ.ಬಿ. ತಳಗೇರಿ
9. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 64, ವಚನ 44, ಕೆ.ಬಿ. ತಳಗೇರಿ
10. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 66, ವಚನ 51, ಕೆ.ಬಿ. ತಳಗೇರಿ
11. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 67, ವಚನ 67, ಕೆ.ಬಿ. ತಳಗೇರಿ

12. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 68, ವಚನ 53, ಕೆ.ಬಿ. ತಳಗೇರಿ
13. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 95, ವಚನ 131, ಕೆ.ಬಿ. ತಳಗೇರಿ
14. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 96, ವಚನ 133, ಕೆ.ಬಿ. ತಳಗೇರಿ
15. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 96,97 ವಚನ 134,135, ಕೆ.ಬಿ. ತಳಗೇರಿ
16. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 96,97 ವಚನ 134,135, ಕೆ.ಬಿ. ತಳಗೇರಿ
17. ಕನಕ ಸಾಹಿತ್ಯ ದರ್ಶನ (ಪ್ರಸ್ತಾವನೆ) ಪುಟ 5, ಸುಧಾಕರ.
18. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 101, ವಚನ 147, ಕೆ.ಬಿ. ತಳಗೇರಿ
19. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತ್ರೆ ಪುಟ 150 ವಚನ 101, 102, ಕೆ.ಬಿ. ತಳಗೇರಿ

***

# ಅಧ್ಯಾಯ – 6

## ಕನಕದಾಸರ ಕೃತಿಗಳಲ್ಲಿ ಒಳನೋಟಗಳು

ದಾರ್ಶನಿಕ ಕನಕದಾಸರು ದೊರೆತನದಿಂದ ದಾಸತ್ವದೆಡೆಗೆ ಮತ್ತು ಹರಿದಾಸ ಪರಂಪರೆಯೊಂದಿಗೆ ಸಾಗಿ ಬಂದ ಬಗೆ ಅತ್ಯಂತ ಕ್ಲಿಷ್ಟಕರವೆನಿಸಿದ್ದರೂ, ಅವರು ಸಾಹಿತ್ಯದ ಮೂಲಕ ತಮ್ಮ ಜೀವನಾನುಭವಗಳನ್ನು ಸಮಾಜದೊಂದಿಗೆ ಹಂಚಿಕೊಂಡು ಅಧೋಗತಿಯತ್ತ ಸಾಗುತ್ತಿದ್ದ ಜನರನ್ನು ಸನ್ಮಾರ್ಗಕ್ಕೆ ತರುವ ನಿಟ್ಟಿನತ್ತ ಪ್ರಯತ್ನಿಸಿರುವುದು ಗಮನಾರ್ಹವಾಗಿದೆ. ಪುರಂದರದಾಸರ ಸಮಕಾಲೀನರಾಗಿದ್ದ ಅವರ ಆಧ್ಯಾತ್ಮಿಕ ಸಿದ್ಧ ಸಾಧನೆಯೊಂದಿಗೆ ಲೌಕಿಕವಾಗಿಯೂ ಅಪಾರ ಅನುಭವ ಹೊಂದಿ ಜನರು ಸಮಾಜದಲ್ಲಿ ಬದುಕಿ, ಕಂಡುಕೊಳ್ಳಬೇಕಾದ ಸಾರ್ಥಕತೆಯ ಕುರಿತು ಹೇಳುತ್ತ ಮುಕ್ತಿ ಮಾರ್ಗ ಹಿಡಿಯುವುದರೊಂದಿಗೆ ಭಗವಂತನ ಸಾಕ್ಷಾತ್ಕಾರಕ್ಕಾಗಿ ಚಿಂತಿಸಿದರು.

"ಆಡು ಮುಟ್ಟದ ಸೊಪ್ಪಿಲ್ಲ ಕನಕದಾಸರು ಸಮಾಜದಲ್ಲಿ ಚಿಂತಿಸದ ವಿಷಯಗಳೇ ಇಲ್ಲ". ಏಕೆಂದರೆ ಅವರಿಗೆ ಭಗವಂತನು ವಿಶೇಷ ರೀತಿಯ ದಿವ್ಯಜ್ಞಾನವನ್ನು ಕರುಣಿಸಿ ಈ ಲೋಕದ ಅಂಕುಡೊಂಕು ತಿದ್ದಿ ಅಧರ್ಮ, ಅಜ್ಞಾನ, ದುರಂಹಕಾರದಲ್ಲಿ ಮಾನವೀಯತೆಯನ್ನೇ ಮರೆತು ದಾನವೀಯ ಕೃತ್ಯಗಳಲ್ಲಿ ತೊಡಗಿದ್ದ ಅಧಮರಿಗೆ ಉಪದೇಶ ನೀಡಲು ಶ್ರಮಿಸಿದ ಕನಕದಾಸರು ಕರ್ಮಯೋಗಿಗಳು.

ಹದಿನಾರನೆಯ ಶತಮಾನದಲ್ಲಿದ್ದ ಮೌಢ್ಯತೆ ಹಾಗೂ ದುರುಳರ ರೌದ್ರತೆಗೆ ಅಂಕಿತ ಹಾಕಲು ಕೀರ್ತನೆಗಳ ಮುಖಾಂತರ ಕ್ರಾಂತಿ ನಡೆಸಲು ಮುಂದಾದರು. ಅವರ ಪ್ರಯತ್ನ ಅಂದಿನವರಿಗಷ್ಟೇ ಅಲ್ಲದೆ ಇಂದಿನ ಅನಿಷ್ಠರಿಗೂ ನೀತಿಪಾಠ ಕಲಿಸಲು ಮಾದರಿಯಾಗಿದೆ. ಅಪ್ಪಟ ಕನ್ನಡ ಸಾಹಿತ್ಯ ರಚನೆಯೊಂದಿಗೆ ಕನಕದಾಸರು ಮಾಡಿದ ಕ್ರಾಂತಿ ಸಂಸ್ಕೃತ ಪಂಡಿತರ ಪಾಂಡಿತ್ಯವನ್ನೇ ಮುಗ್ಗರಿಸಿ ಹುಬ್ಬೇರಿಸುವಂತೆ ಮಾಡಿದ್ದು ಅವರ ನಿಷ್ಠುರ ನಿಲುವನ್ನು ಸೂಚಿಸುತ್ತದೆ. ಕಂಡದ್ದನ್ನು ಕಂಡಂತೆ ಹೇಳಿ, ಮನುಷ್ಯರ ಅನಾಚಾರ ಹಾಗೂ ಅನೈತಿಕತೆಗಳನ್ನು ಮುಕ್ತಗೊಳಿಸಿ ಶಿಷ್ಟ ಸಮಾಜ ನಿರ್ಮಿಸಲು ಪ್ರಯತ್ನಸಿದರು. ಅಂದು ಅವರು ಆಡಿದ ನೀತಿ ಬೋಧನೆಯ ಕಡುನುಡಿಗಳು ನಿಷ್ಪಕ್ಷ ಮನೋಭಾವನೆಗೆ ಹಿಡಿದ ಕನ್ನಡಿ.

ಹುಟ್ಟುವುದು ಅನಿವಾರ್ಯವಾದರೂ ಸಾಯುವುದು ಖಚಿತ ಎಂಬ ಸತ್ಯವನ್ನು ಸಂಪತ್ತಿನ ಹಾಗೂ ಅಂತಸ್ತಿನ ಮದದಲ್ಲಿ ಮೈಮರೆತಿದ್ದ ಮದಾಂಧರಿಗೆ ಹುಟ್ಟು ಸಾವಿನ ಮಧ್ಯದ ಎರಡು ದಿನದ ಸಂಸಾರದ ಸಾರವನ್ನರುಹಿದರು. ಸಕಲರನ್ನು ಸಹೃದಯತೆಯೊಂದಿಗೆ ಕಂಡು ಭಗವಂತನ ಸಾಕ್ಷಾತ್ಕಾರ ಹೊಂದಲು ಬಯಸಬೇಕು, ಇದರಿಂದ ಜನ್ಮ ಸಾರ್ಥಕವಾಗುತ್ತದೆ ಎಂಬ ಆಂತರಿಕ ಸತ್ಯವನ್ನು ಕನಕದಾಸರು ತಮ್ಮ ಸಾಹಿತ್ಯ ಕೃತಿ ರಚನೆಗಳ ಮುಖಾಂತರ ಮಾಡಿದ್ದೊಂದು ಮೇರು ಸಾಧನೆ.

ಕನಕದಾಸರು ಸ್ವಪ್ನಾವಸ್ಥೆಯಲ್ಲಿ ತಮ್ಮ ಆರಾಧ್ಯ ದೇವನಾದ ಆದಿಕೇಶವನ ಆಣತಿಯಂತೆ ದಾಸನಾಗುವ ನಿರ್ಧಾರ ಕೈಗೊಂಡರು. ಭಗವಂತನ ಸಾಕ್ಷಾತ್ಕಾರ ಹಾಗೂ ಮುಕ್ತಿ ಮಾರ್ಗ ತೋರಿಸುವ ಗುರುವಿನ ಹಂಬಲದೊಂದಿಗೆ ಊರೂರು ಅಲೆದು ಹರಿದಾಸರಾದ ವ್ಯಾಸರಲ್ಲಿಗೆ ಬಂದರು ಎಂಬ ಮಾತು ಕನಕದಾಸರ ಜೀವನ ಚರಿತ್ರೆಯಿಂದ ಕಂಡುಬರುತ್ತದೆ. ಕನಕದಾಸರ ಕೀರ್ತನೆಗಳಲ್ಲಿ ಇರುವ ಉಲ್ಲೇಖದಂತೆ ಅವರಿಗೆ ವ್ಯಾಸರಾಯರಷ್ಟೇ ಗುರುವಾಗಿರಲಿಲ್ಲ, ಹಾಗೂ ಅವರಿಂದಲೇ ದೀಕ್ಷೆ ಹೊಂದಲಿಲ್ಲ ಎಂಬುದಕ್ಕೆ ನಿದರ್ಶನಗಳಿವೆ.

ಮತವೆ ಒಳ್ಳೆಯದು ಭಾಗವತವು–ನಮ್ಮ
ಯತಿ ರಾಮಾನುಜಯೆಂಬ ಬೇರೆ ಮನಸಿನ ಮತವೆ ಒಳ್ಳೆಯದು'

ಕನಕದಾಸರಿಗೆ ದಾಸ ದೀಕ್ಷೆ ದೊರೆತದ್ದು ರಾಮಾನುಜ ಮತದ ದೀಕ್ಷೆಯೇ ಹೊರತು ಮಾಧ್ವ ಮತದ ವ್ಯಾಸರಾಯರಿಂದಲ್ಲ ಎಂಬುದು ಖಚಿತಗೊಳ್ಳುತ್ತದೆ. ತಾತಾರ್ಯರು, ರಾಮಾನುಜಾಚಾರ್ಯರು, ವ್ಯಾಸರಾಯರು ಹಾಗೂ ವಾದಿರಾಜರು ಹೀಗೆ ವಿವಿಧ ಬ್ರಾಹ್ಮಣ ಪಂಗಡದ ಗುರುಗಳು ದಾಸರಾದರೂ ಯಾರೊಬ್ಬರೂ ಕನಕದಾಸರಿಗೆ ನಿಶ್ಚಿತ ಗುರುಗಳಾಗಿರಲಿಲ್ಲ, ಕನಕದಾಸರು ತ್ರಿಕಾಲ ಜ್ಞಾನಿಗಳು. ಅಲ್ಲದೆ ಗುರುವನ್ನು ಮೀರಿಸುವ ಆಂತರಿಕ ಜ್ಞಾನವನ್ನು ಹೊಂದಿದ್ದರು ಎಂಬುದನ್ನು 'ನಾ ಹೊದರೆ ಹೋದೇನು' ಎಂದು ನುಡಿದು ನಾನು–ನನ್ನಿಂದ ಎಂಬ ಅಹಮ್ಮಿನ ಕೋಟೆಯಲ್ಲಿ ಮಲಗಿದ್ದ ಅಜ್ಞಾನಿ ವೈದಿಕ ಮಠಿಕರನ್ನು ಎಚ್ಚರಿಸಿದ್ದು ನಿಬ್ಬೆರಗಾಗಿಸುತ್ತದೆ.

ಕನಕದಾಸರು ತಮ್ಮ ಜ್ಞಾನ ಸಂಪಾದನೆಗಾಗಿಯೇ ಗುರುಗಳನ್ನು ಹುಡುಕಿಕೊಂಡರೆನ್ನುವುದಕ್ಕಿಂತ ಗುರುವಿನಲ್ಲಿನ ಆಂತರಿಕ ಗುಣ ಸ್ವಭಾವಗಳನ್ನು ವಿವಿಧ ಗುರುಗಳ ಸಂಪರ್ಕದ ಮುಖಾಂತರ ಗುರುತಿಸಲು ಪ್ರಯತ್ನಿಸಿದರೆಂಬುದು ಸೂಕ್ತ. ಒಬ್ಬ ಮನುಷ್ಯನು ಗುರುವಾಗಿರುವುದರ ಗುಟ್ಟೇನು? ಎಲ್ಲರಲ್ಲೂ ಗುರುತ್ವ ಏಕೆ ಇರುವುದಿಲ್ಲ? ಗುರುವಾದವನು ಮನುಷ್ಯನಿಂದ ಭಿನ್ನನಾದವನೆ? ಎಂಬೆಲ್ಲ ಪ್ರಶ್ನೆಗಳನ್ನು ತಮ್ಮಲ್ಲಿ ಸೃಷ್ಟಿಸಿಕೊಂಡು ಸೂಕ್ತ ಉತ್ತರಕ್ಕಾಗಿ ತಡಕಾಡಿ ವಿವಿಧ ಗುರುಗಳ ಸಖ್ಯ ಬೆಳೆಸಿದರೆಂಬ ಪ್ರಶ್ನೆಯು ಅವರ ಕುರಿತು ಸಂಶೋಧಿಸುವ ಸಂಶೋಧಕರನ್ನೂ ಕಾಡದೇ ಬಿಟ್ಟಿಲ್ಲ.

ಬ್ರಾಹ್ಮಣರಲ್ಲಿಯೇ ವಿವಿಧ ಮತ–ಪಂಗಡಗಳು, ಪ್ರತ್ಯೇಕ ಗುರುಗಳು ಇದು ಹೇಗೆ ಸಾಧ್ಯ? ಬ್ರಾಹ್ಮಣರಲ್ಲೇ ಮತಭೇದವೆಂಬುದು ಸಮಂಜಸವಾದುದೆ? ಎಂಬ ಪ್ರಶ್ನೆಗಳೊಂದಿಗೆ ಬ್ರಾಹ್ಮಣ್ಯದಲ್ಲಿಯೇ ಮತಭೇದ ಎಣಿಸುವ ಗುರುಗಳನ್ನು ಹಿಡಿದು ಕೇಳುವ ಧೈರ್ಯವನ್ನು

ಕನಕದಾಸರು ಸಾಹಿತ್ಯಕವಾಗಿ ಮಾಡಿದ್ದಾರೆ. ಬ್ರಾಹ್ಮಣರಿಗಷ್ಟೇ ಏಕೆ ಪಾಂಡಿತ್ಯ? ಅವರಷ್ಟೇ ಏಕೆ ವೇದ ಪಾಠ ಕಲಿಯಲು ಸೂಕ್ತರು? ಉಳಿದ ಮತದ ಜನರಿಗೆ ವೇದಾಧ್ಯಯನ ನಿಷಿದ್ಧವೆ? ಈ ತಾರತಮ್ಯ ಸಮಾಜದಲ್ಲಿ ಬೆಳೆಯಲು ಕಾರಣವೇನು? ಬ್ರಾಹ್ಮಣರ ಮನೆಯ ಸ್ತ್ರೀಯರಿಗೆ ಸಂಸ್ಕೃತ ಹಾಗೂ ವೇದ ಶಿಕ್ಷಣ ಕೊಡಿಸದೇ ಇರಲು ಕಾರಣವೇನು? ಎಂಬ ಕನಕದಾಸರ ಒಳನೋಟದ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಅನಿವಾರ್ಯವಾಗಿದೆ.

ಕನಕದಾಸರ ಬದುಕೇ ಒಂದು ನಿಗೂಢ. ಅವರು ತಮ್ಮ ಸಾಹಿತ್ಯದುದ್ದಕ್ಕೂ ಸಮಾಜದ ಜನರನ್ನು ಪ್ರಶ್ನಿಸುತ್ತ ಉತ್ತರ ಹುಡುಕುವ ಪ್ರಯತ್ನಕ್ಕೆ ಮುಂದಾಗುತ್ತಾರೆ. ಅಪ್ಪಟ ಹರಿಭಕ್ತರೆನಿಸಿದ್ದರೂ ವೈದಿಕರು ಹರಿಯ ಸಾಕ್ಷಾತ್ಕಾರ ಹೊಂದದಿರುವ ಕಾರಣವೇನು? ವಿಷ್ಣುವಿನ ಹೆಸರಿನಿಂದ ಹೊಟ್ಟೆ ಹೊರೆದುಕೊಳ್ಳಲು ಸಮಾಜದ ಇತಿ ಮಿತಿಗಳನ್ನೇ ಬುಡಮೇಲು ಮಾಡುತ್ತ ಜನರ ಮನಸ್ಸನ್ನು ಮೌಢ್ಯತೆಯತ್ತ ಹೊರಳಿಸಿದರು. ಅನಿಷ್ಠ ಆಚರಣೆಗಳತ್ತ ಜನರನ್ನು ಕೊಂಡೊಯ್ಯುವ ಅವರ ಉದ್ದೇಶವಾದರೂ ಏನಿರಬಹುದು? ಅಮಾಯಕ ಜನರು ಮೌಢ್ಯಾಂಧಕಾರದಿಂದ ಹೊರಬಂದು ತಮ್ಮ ಮಾನವೀಯ ಮೌಲ್ಯ ಗುರುತಿಸಿಕೊಳ್ಳುವ ಪ್ರಯತ್ನವನ್ನು ಏಕೆ ಮಾಡುತ್ತಿಲ್ಲ ಎಂಬ ನೂರಾರು ಪ್ರಶ್ನೆಗಳು ಅವರನ್ನು ಕಾಡದೇ ಬಿಡಲಿಲ್ಲ.

ವಿಷ್ಣುವಿನ ಅಪ್ಪಟ ಭಕ್ತರೆಂದು ಪವಿತ್ರ ಸ್ನಾನ ಮಾಡಿ ದೃಢಭಕ್ತಿಯೇ ಇಲ್ಲದೆ ಗಂಟೆಗಟ್ಟಲೆ ಪೂಜೆ–ಆರಾಧನೆ ಮಾಡಿದರೆ ಫಲವಿಲ್ಲ. ಅದು ಢಾಂಬಿಕ ಭಕ್ತಿಯೇ ಹೊರತು ನಿಜ ಭಕ್ತಿಯಾಗಲಾರದು. ಪಾಂಡಿತ್ಯದ ಅಹಂಕಾರದಿಂದ ಸಾಮಾನ್ಯನನ್ನು ಮೂರ್ಖನೆಂದು ಭಾವಿಸುವುದು ದೊಡ್ಡ ಮೂರ್ಖತನ. ಮಡಿವಂತಿಕೆಯ ಸೋಗಿನಲ್ಲಿ ತಮ್ಮನ್ನೇ ತಾವು ಮೇಲೆಂದು ಭಾವಿಸಿ ಇತರರನ್ನು ಕೆಳಮಟ್ಟದಲ್ಲಿ ಕಂಡರೆ ಭಗವಂತನ ಸಾಕ್ಷಾತ್ಕಾರ ಸಾಧ್ಯವಾಗದ ಮಾತು. ಈ ಸತ್ಯವನ್ನು ಎಲ್ಲಿಯವರೆಗೆ ಒಪ್ಪಿಕೊಳ್ಳುವುದಿಲ್ಲವೋ ಅಲ್ಲಿಯವರೆಗೂ ತಾವು ಮಾಡುವ ವ್ರತಾಚರಣೆಗಳು ವ್ಯರ್ಥವಾಗಿರುತ್ತವೆ ಎಂದು ಕನಕದಾಸರು ಎಚ್ಚರಿಸಿದರು. ಮೇಲ್ವರ್ಗದ ನಾಟಕೀಯ ನಡವಳಿಕೆಗಳನ್ನು ಖಂಡಿಸಿದರು. ಮೇಲ್ವರ್ಗದವರಾಗಲಿ ಕೆಳವರ್ಗದವರಾಗಲಿ ಏಕಾಗ್ರತೆ ಇಲ್ಲದೆ ವರ್ಷಗಟ್ಟಲೆ ಆರಾಧಿಸಿದರೂ ಭಗವಂತನ ದರ್ಶನ ಅಸಾಧ್ಯವಾದುದು. ಭಗವಂತನ ದರ್ಶನ ಭಾಗ್ಯಕ್ಕೆ ಕ್ಷಣಮಾತ್ರದ ಧೃಡ ಭಕ್ತಿ ಸಾಕೆಂದು ಉಪದೇಶಿಸಿದರು. ಅಜ್ಞಾನದ ಅಮಲಿನಲ್ಲಿ ಭಕ್ತಿ ಮಾರ್ಗದ ನೈಜತೆಯನ್ನು ಅರಿಯದ ಕೆಲ ಪಂಡಿತೋತ್ತಮರನ್ನು ಹರಿಭಕ್ತಿಯ ನೈಜ ಮಾರ್ಗದತ್ತ ಸೆಳೆಯಲು ಮಾಡಿರುವ ಕನಕದಾಸರ ಪ್ರಯತ್ನವು ವಿಶೇಷವಾಗಿದೆ.

ಕನಕದಾಸರು ಭಗವಂತನ ಶ್ರೇಷ್ಠತೆಯನ್ನು ಕುರಿತು ಮನಗಾಣಿಸುವುದರ ಜೊತೆಗೆ ಭಗವಂತನನ್ನೂ ಪ್ರಶ್ನಿಸುವ ಸಾಹಸ ಮಾಡುತ್ತಾರೆ.

ಇನ್ನೆಷ್ಟು ಕಾಲ ನೀನಿಲ್ಲಿ ಮಲಗಿದ್ದರೂ
ನಿನ್ನನೆಬ್ಬಿಸುವವರನೊಬ್ಬರನು ಕಾಣೆ[2]

ಕನಕದಾಸರು ಹರಿಯನ್ನು ಪ್ರಶ್ನಿಸಿ ನೂರಾರು ವರ್ಷಗಳಿಂದ ಮಲಗಿರುವ ನಿನ್ನನ್ನು

ಎಬ್ಬಿಸುವವರು ಯಾರೊಬ್ಬರೂ ಬಂದಿಲ್ಲವೆ? ಹಾಗಾದರೆ ನಿನ್ನನ್ನೆಬ್ಬಿಸುವ ಹಾಗೂ ನಿನ್ನೊಂದಿಗೆ ಮಾತನಾಡುವ ಅರ್ಹತೆಯನ್ನು ಹೊಂದಿಲ್ಲದ ವೈಷ್ಣವರ ಶತಮಾನಗಳ ಪೂಜೆಯಾದರೂ ಎಷ್ಟರಮಟ್ಟಿಗೆ ನಿನಗೆ ಸಂದಿದೆ ರಂಗ? ಇದರ ರಹಸ್ಯವಾದರೂ ಏನು? ಎಂಬೆಲ್ಲ ಪ್ರಶ್ನೆಗಳನ್ನು ಶ್ರೀರಂಗನಿಗೆ ಹಾಕುತ್ತ ಶ್ರೀರಂಗನ ಪೂಜೆಯನ್ನು ಶತಮಾನಗಳಿಂದ ನಡೆಸಿಕೊಂಡು ಬಂದ ಅರ್ಚಕರನ್ನು ಹಾಗೂ ಪಂಡಿತೋತ್ತಮರನ್ನು ಪ್ರಶ್ನಿಸಿದ್ದಾರೆ.

ಅನಾದಿಕಾಲದಿಂದಲೂ ಶ್ರೀರಂಗನ ಪೂಜೆಗೈಯುತ್ತಿರುವ ತಮಗೆ ಇಲ್ಲಿಯವರೆಗೂ ಆತನ ಸಾಕ್ಷಾತ್ಕಾರವಾಗಿಲ್ಲ ಏಕೆ? ಉನ್ನತ ವರ್ಗದವರಾದ ನಿಮ್ಮ ಭಕ್ತಿಯನ್ನು ಒಪ್ಪಿಕೊಳ್ಳದೆ ಶ್ರೀರಂಗ ನಿಮ್ಮೊಡನೆ ಮಾತನಾಡದಿರುವ ರಹಸ್ಯವಾದರೂ ಏನು? ಎಂದು ಕನಕದಾಸರು ಪ್ರಶ್ನಿಸಿ, ಭಗವಂತನಿಗೆ ವೈಷ್ಣವರ ಭಕ್ತಿಯು ಅಪ್ರಿಯವಾಗಲು ಕಾರಣವೇನೆಂದು ನೇರವಾಗಿ ಪ್ರಶ್ನಿಸುವ ಧೈರ್ಯ ಮಾಡಿರುವುದು ಮೆಚ್ಚುವಂಥದ್ದು.

ವಿಷ್ಣುವಿನ ಅಪ್ಪಟ ಭಕ್ತನಾಗುವುದು ಬರೀ ಢಾಂಬಿಕ ಭಕ್ತಿಯಿಂದಲ್ಲ. ಹೃದಯಾಂತರಾಳದಿಂದ ಪುಟಿದೇಳುವ ದೃಢ ಭಕ್ತಿಯಿಂದ ಹಾಗೂ ಏಕಾಗ್ರತೆಯ ತಪಸ್ಸಿನಿಂದ ಎಂದು ಕೆಲ ಢಾಂಬಿಕರಿಗೆ ಕಿವಿ ಮಾತು ಹೇಳಿದ್ದಾರೆ. ಇವೆಲ್ಲ ವಿಷಯಗಳನ್ನು ಕನಕದಾಸರು ಕೇವಲ ಮಾತಿನಿಂದ ಹೇಳದೇ ಆಚರಣೆಯಲ್ಲಿ ತಂದು ಡಾಂಬಿಕ ಭಕ್ತರಿಗೆ ಕನ್ನಡಿ ಹಿಡಿದಿದ್ದಾರೆ.

ದಾಸರು ಅಕ್ಷರ ಸಂಸ್ಕೃತಿಗೆ ವಿಶೇಷವಾದ ಒತ್ತು ನೀಡಿದ್ದು ಮಹತ್ವದ ವಿಚಾರ.

ಮೌಖಿಕ ಪರಂಪರೆಯ ಜೊತೆಗೆ ಲಿಖಿತ ಪರಂಪರೆಯೂ ವಿಶೇಷವಾದದ್ದೆಂಬುದನ್ನು ದಾಸರು ಮನಗಾಣಿಸಿರುವುದನ್ನು ಈ ಕೆಳಗಿನ ಉದಾಹರಣೆಗಳಿಂದ ಅರಿಯಬಹುದಾಗಿದೆ.

1. ವರಮೋಹನ ತರಂಗಿಣಿಯೆಂಬ ಕಾವ್ಯದ
   ಬರೆದೋದಿ ಕೇಳಿದ ಜನರ
   ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
   ಪೊರೆವ ಲಕ್ಷ್ಮೀಕಾಂತ ಬಿಡದೆ[3],

2. ......... 'ಬರೆದು ಓದಿ ಕೇಳಿದವರಿಗೆ ಕರೆದು ಮುಕ್ತಿ ಕೊಡುವನಾದಿಕೇಶವ'[4]

**ಕೊನೆ ಟಿಪ್ಪಣಿಗಳು:**

1. ಸಮಗ್ರ ದಾಸಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 67, ಪುಟ 60, ಪ್ರೊ. ಸುಧಾಕರ.
2. ಸಮಗ್ರ ದಾಸಸಾಹಿತ್ಯ ಸಂಪುಟ 5, ಭಾಗ 1, ಕೀರ್ತನೆ 241, ಪುಟ 237, ಪ್ರೊ. ಸುಧಾಕರ.
3 ಕನ್ನಡ ಕಾವ್ಯಮಾಲೆ–16, ಮೋಹನ ತರಂಗಿಣಿ, ಪೀಠಿಕೆ (ಪದ್ಯ 4), ಸಂಪಾದಕರು: ಆರ್.ಸಿ. ಹಿರೇಮಠ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪ್ರಥಮ ಆವೃತ್ತಿ 1973.
4 ಕನಕದಾಸರ ಕೀರ್ತನೆ, ಈಶ ನಿನ್ನ ಚರಣ ಭಜನೆ.

***

# ಸಮಾರೋಪ

ಕನಕದಾಸರು ದಲಿತ ಬಂಡಾಯದ ಹೋರಾಟಗಾರರಲ್ಲಿ ಏಕಮೇವರಾಗಿದ್ದಾರೆ. ಶೂದ್ರಕುರುಬ ಸಮುದಾಯದಲ್ಲಿ ಹುಟ್ಟಿ ದಲಿತ ಪರ ಹಿತಚಿಂತನೆಗಾಗಿ ತಮ್ಮನ್ನು ಸಮರ್ಪಿಸಿಕೊಂಡು ಸಮಾಜದಲ್ಲಿ ತುಳಿತಕ್ಕೊಳಗಾದವರನ್ನು ಮೇಲೆತ್ತುವ ಕೆಲಸದಲ್ಲಿ ತೊಡಗಿದುದನ್ನು ಕಂಡಾಗ ವಿಶೇಷ ಆದರ ಉಂಟಾಗುತ್ತದೆ. ಭಗವಂತನು ಅವರನ್ನು ಒಬ್ಬ ದಲಿತೋದ್ಧಾರಕನ ರೂಪದಲ್ಲಿ ಮನುಷ್ಯನನ್ನಾಗಿ ಹುಟ್ಟಿಸಿ, ಮನುಷ್ಯನ ಮನುಷ್ಯತ್ವವನ್ನೇ ಅರುಹುವುದಕ್ಕಾಗಿ ಅಪಾರ ಜ್ಞಾನ ಭಂಡಾರದೊಂದಿಗೆ ಸಮಾಜಮುಖಿ ಭಾವನೆ ತಳೆದು ಸಾಮಾಜಿಕ ಅನಿಷ್ಠತೆಗೆ ತೆರೆ ಎಳೆದು ಸ್ವಾಸ್ತ್ಯಕರ ಸಮಾಜ ನಿರ್ಮಿಸಲು ಬಂದ ಸಮಾಜ ಸುಧಾರಕರೆಂಬುದರಲ್ಲಿ ಅನುಮಾನವಿಲ್ಲ.

ಕಬ್ಬಿಣವನ್ನು ಕಬ್ಬಿಣವೇ ಕುಟ್ಟಿ ಹದಗೊಳಿಸುವ ತೆರದಿ ಒಬ್ಬ ಶೂದ್ರಸಮುದಾಯದ ಕನಕದಾಸರು ಮೇಲ್ವರ್ಗದ ಪಂಡಿತೋತ್ತಮ ಮನುಷ್ಯರನ್ನು ತಮ್ಮ ಮೊನಚಾದ ಮಾತುಗಳಿಂದ ಕುಟ್ಟಿ ಅವರ ಅಜ್ಞಾನ ಕಳೆದು ಸುಜ್ಞಾನ ತುಂಬಲು ಕನಕದಾಸರು ಹೆಣಗಿದ್ದಾರೆ.

ಕನಕದಾಸರು ತ್ರಿಕಾಲ ಜ್ಞಾನಿಗಳಾಗಿದ್ದರೆಂಬುದಕ್ಕೆ ಹಿಂದಿನ–ಇಂದಿನ ಹಾಗೂ ಮುಂದಿನ ದಿನಮಾನಗಳಲ್ಲಿ ಆಗಿಹೋದ, ಆಗುತ್ತಿರುವ–ಆಗಬೇಕಾದ ವಿಷಯಗಳನ್ನು ತಮ್ಮ ಸಮಗ್ರ ಸಾಹಿತ್ಯದಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಅವರ ಕೃತಿಗಳು ಇಂದಿನ ಮುಂದುವರೆದ ಸಮಾಜದಲ್ಲೂ ಮೌಢ್ಯಭಾವನೆಯಿಂದ ಸಮಾಜವನ್ನು ಶೋಷಿಸುತ್ತಿರುವ ಜನರಿಗೆ ಹಿಡಿದ ಕೈಗನ್ನಡಿಯಾಗಿದೆ.

ಕನಕದಾಸರ ಸಾಹಿತ್ಯದಲ್ಲಿ ನಿಷ್ಪಕ್ಷಪಾತ ಧೋರಣೆಗಳು ಅವರ ಕಠೋರ ನಿಲುವನ್ನು ಸೂಚಿಸುತ್ತವೆ. ಪಕ್ಷಭೇದದ ಕೊಂಡಿಯನ್ನೇ ಕಳಚಿಹಾಕುವ ಕೆಲಸವನ್ನು ಅವರು ಸಾಹಿತ್ಯಿಕವಾಗಿ ಮಾಡಿದ್ದು ವಿಶೇಷವಾಗಿದೆ. ಕೆಲ ಸ್ವಾರ್ಥಿಗಳಿಗೆ ಇದು ಬಿಸಿ ತುಪ್ಪವಾಗಿದೆ. ತಮ್ಮ ತಪ್ಪನ್ನು ತಿದ್ದಿಕೊಂಡು ಸಮಾಜದಲ್ಲಿ ನಿಸ್ವಾರ್ಥ ಮನೋಭಾವನೆಯಿಂದ ಪರರ ಹಿತಕ್ಕಾಗಿ ದುಡಿಯಲು ಹೇಳಿದ ನೀತಿ ಪಾಠ ಸಾಹಿತ್ಯದುದ್ದಕ್ಕೂ ಕಂಡುಬರುತ್ತದೆ. ಕನಕದಾಸರ ಕೃತಿಗಳಲ್ಲಿ

ನಾವು ಪ್ರಶ್ನೆಗಳ -ಸುರಿಮಳೆಯನ್ನೇ ಕಾಣುತ್ತೇವೆ. ಸಮಾಜಕ್ಕೆ ಹಾಗೂ ಮೇಲ್ವರ್ಗದವರಿಗೆ ಹಾಕಿದ ಪ್ರಶ್ನೆಗಳು ಕ್ಲಿಷ್ಟಕರವಾಗಿವೆ. ಶೋಷಣೆಗೊಳಗಾದ ಮನುಷ್ಯ ಶೋಷಿಸುವವರನ್ನು ಪ್ರಶ್ನಿಸುವಂತೆ ಮಾಡಿರುವುದು ಅವರಲ್ಲಿಯ ಅಂತರಜ್ಞಾನದ ಕುರುಹನ್ನು ಸಾರಿ ಹೇಳುತ್ತಿವೆ. ಇದು ನಮ್ಮನ್ನು ಪ್ರಾಪಂಚಿಕವಾಗಿ ವಿಚಾರದೆಡೆಗೆ ಕೊಂಡೊಯ್ಯುವುದರಲ್ಲಿ ಸಂದೇಹವಿಲ್ಲ.

ಕನಕದಾಸರು ತಮ್ಮ ಸಾಹಿತ್ಯಿಕ ಕೃತಿಗಳಲ್ಲಿ ದಲಿತರು ಹಾಗೂ ದುರ್ಬಲರ ಪರ ವಾದ ಮಂಡಿಸುವದರ ಮುಖೇನ ಮೇಲ್ವರ್ಗದವರ ಹಿಡಿತದಲ್ಲಿ ನಲುಗಿ ನರಕ ಯಾತನೆ ಅನುಭವಿಸುತ್ತಿದ್ದ ದಲಿತರನ್ನು ಮುಕ್ತಗೊಳಿಸುವ ಉನ್ನತ ಪ್ರಯತ್ನ ಮಾಡಿದ್ದಾರೆ. ಇದರಿಂದ ಕುಂದಿದ್ದ ದಲಿತರ ಧ್ವನಿಗೆ ಪುಷ್ಠಿ ದೊರೆತದಂತಾಗಿದೆ. ದಲಿತರು ಇಂದು ನಿಸ್ಸಂಕೋಚವಾಗಿ ತಮ್ಮ ಬದುಕಿನುದ್ದಕ್ಕೂ ನೆಮ್ಮದಿ ಕಾಣಲು ಸಾಧ್ಯವಾಯಿತೇನೋ ಎಂಬ ಕಲ್ಪನೆ ಬಾರದೇ ಇಲ್ಲ.

ರಾಮಧಾನ್ಯ ಚರಿತ್ರೆಯು ಜಾಗತಿಕ ಮಟ್ಟದ ಅದ್ಭುತ ಸಾಹಿತ್ಯ ಕೃತಿ. ಅತೀ ಚಿಕ್ಕ ಕೃತಿಯಾಗಿದ್ದರೂ ಅತ್ಯಂತ ಮೌಲಿಕವಾದುದು ಎಂಬುದನ್ನು ಅಲ್ಲಗಳೆಯುವಂತಿಲ್ಲ. ರಾಗಿ–ರಾಮಾಯಣವೆಂದೇ ಖ್ಯಾತಿ ಹೊಂದಿದ ರಾಮಧಾನ್ಯ ಚರಿತ್ರೆಯು ಜಾತಿ–ಜಾತಿಗಳ ಮಧ್ಯೆ ನಡೆದ ಕಠೋರ ಘರ್ಷಣೆಯಂತಿದ್ದು ನ್ಯಾಯಕ್ಕಾಗಿ ಹೋರಾಟ ನಡೆಸಿ ಶೋಷಿತರು ಹಾಗೂ ಹಿಂಸೆಗೊಳಗಾದವರನ್ನು ದುರುಳರ ವಜ್ರಮುಷ್ಠಿಯಿಂದ ಬಂಧಮುಕ್ತಗೊಳಿಸಲು ನಡೆಸಿದ ವಾದ–ವಿವಾದದ ಸಂಕೇತದಂತಿದೆ.

ನವಧಾನ್ಯಗಳಲ್ಲಿಯೇ ಶ್ರೇಷ್ಠರೆನಿಸಿದ ನರೆದಲಗ ಮತ್ತು ವ್ರಿಹಿಗಳ ಮಧ್ಯದ ಜಗಳ ದೇವಲೋಕದವರೆಗೂ ಪಸರಿಸಿ ಕೊನೆಗೆ ದೇವೇಂದ್ರನ ಸಮ್ಮುಖದಲ್ಲಿ ನೆಲ್ಲು–ರಾಗಿಗಳನ್ನು ಪರೀಕ್ಷೆಗೊಳಪಡಿಸಿ ರಾಗಿಯ ಶ್ರೇಷ್ಠತೆಯನ್ನು ಒರೆಗೆ ಹಚ್ಚುವುದರ ಮುಖಾಂತರ ರಾಮನು ನಿಷ್ಪಕ್ಷಪಾತವಾಗಿ ನೀಡಿದ ತೀರ್ಪು ಇಂದಿನ ನ್ಯಾಯಾಧೀಶರಿಗೂ ಮಾದರಿಯಾಗಿದೆ ಎಂಬುದು ಹತ್ತಿರದಿಂದ ಮನವರಿಕೆಯಾಗುತ್ತದೆ. ಮಡಿಕರ ಕಿರುಕುಳದಿಂದ ತತ್ತರಿಸಿದ ಕನಕದಾಸರು, ಕೆಳವರ್ಗದವರ ಬೆಲೆಯನ್ನು ರಾಮಧಾನ್ಯ ಚರಿತೆಯ ಮುಖಾಂತರ ಸಮಾಜಕ್ಕೆ ಪರಿಚಯಿಸಿದರೆಂಬುದು ಸ್ಪಷ್ಟವಾಗುತ್ತದೆ.

ಒಟ್ಟಿನಲ್ಲಿ ಕನಕದಾಸರ ಬಂಡಾಯದ ದನಿ ಸಂಪೂರ್ಣ ಸಮಾಜವನ್ನೇ ಪಲ್ಲಟಗೊಳಿಸಿ ಕತ್ತಲಿನಿಂದ ಬೆಳಕಿನೆಡೆಗೆ ಸಾಗಿದ್ದು ಇತಿಹಾಸದಲ್ಲಿ ಮಹತ್ತರವಾದ ಮೈಲಿಗಲ್ಲು ಎಂಬುದು ನಿಸ್ಸಂಶಯ.

***

# ಆಕರ ಗ್ರಂಥಗಳು


1. **ಕನಕಸಂವಾದ ಮಾಲಿಕೆ 1**
**'ಕನಕನ ಸುತ್ತಮುತ್ತ : ಸಂಕಥನಗಳ ಜಿಜ್ಞಾಸೆ'**
ಸಂಪಾದಕರು ಡಾ. ಬಿ. ಶಿವರಾಮ ಶೆಟ್ಟಿ
ಪ್ರಕಟಣೆ : ಕನಕದಾಸ ಸಂಶೋಧನಾ ಕೇಂದ್ರ, ಮಂಗಳೂರು ವಿಶ್ವವಿದ್ಯಾಲಯ (2013)

2. **'ಕನಕ ಸಾಹಿತ್ಯದರ್ಶನ' ಸಂಪುಟ 1**
ಸಂಪಾದಕರು ಡಾ. ದೇ. ಜವರೇಗೌಡ
ಪ್ರಕಟಣೆ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು (1990)

3. **'ಕನಕ ದಾಹಿತ್ಯ ದರ್ಶನ' ಸಂಪುಟ 4, ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು**
ಸಂಪಾದಕರು : ಸುಧಾಕರ,
ಪ್ರಕಟಣೆ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು (1990)

4. **'ಸಮಗ್ರ ದಾಸ ಸಾಹಿತ್ಯ' ಸಂಪುಟ 5, ಭಾಗ 1**
ಸಂಪಾದಕರು : ಪ್ರೊ. ಸುಧಾಕರ
ಪ್ರಕಟಣೆ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು (2003)

5. **'ಸಮಗ್ರ ದಾಸಸಾಹಿತ್ಯ' ಸಂಪುಟ 5, ಭಾಗ 2**
ಸಂಪಾದಕರು : ಪ್ರೊ. ಸುಧಾಕರ
ಪ್ರಕಟಣೆ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು (2003)

6. **ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತೆ'**
ಲೇಖಕರು : ಕೆ.ಬಿ. ತಳಗೇರಿ
ಪ್ರಾಶಕರು : ವಿದ್ಯಾನಿಧಿ ಪ್ರಾಶನ, ಸ್ಟೇಷನ್ ರೋಡ್, ಮಹೇಂದ್ರಕರ ಸರ್ಕಲ್, ಗದಗ (1989)

7. **'ರಾಮಧಾನ್ಯ ಚರಿತೆ'**
ಸಂಪಾದಕರು ದೇ. ಜವರೇಗೌಡ,
ಮುದ್ರಕರು ಮೈಸೂರು ಪ್ರಿಂಟಿಂಗ್ ಆಂಡ್ ಪಬ್ಲಿಷಿಂಗ್ ಹೌಸ್, ಮೈಸೂರು (1965)

8. **ಕನ್ನಡ ಕಾವ್ಯಮಾಲೆ-16, ಮೋಹನ ತರಂಗಿಣಿ, ಪೀಠಿಕೆ (ಪದ್ಯ 4),**
ಸಂಪಾದಕರು: ಆರ್.ಸಿ. ಹಿರೇಮಠ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪ್ರಥಮ ಆವೃತ್ತಿ 1973.

9. **ಕನಕದಾಸರ ಕೀರ್ತನೆ, ಈಶ ನಿನ್ನ ಚರಣ ಭಜನೆ.**


***

